ಶ್ರೀ

ಮುಪ್ಪಿನ ಷಡಕ್ಷರಿದೇವ

ಕೃತ

# ಸುಬೋಧ ಸಾರ

ಸ್ಥಾಪಕರು

ಸಂಚಾಲಕರು ಮತ್ತು ಪ್ರಕಾಶಕರು :

ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು

ಶ್ರೀ ಮ. ನಿ. ಜ. ಮುರುಘರಾಜೇಂದ್ರ ಪ್ರಸಾದನಿಲಯ

ಶ್ರೀ ಮುರುಘಾಮಠ, ಹಾವೇರಿಪೇಟೆ

ಧಾರವಾಡ

*

ಸಂಗ್ರಾಹಕರು :

ಶ್ರೀ ಹರ್ಡೇಕರ ಮಂಜಪ್ಪನವರು

ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ—೧೦

ಶ್ರೀ

ಮುಪ್ಪಿನ ಷಡಕ್ಷರಿದೇವ

ಕೃ ತ

# ಸುಬೋಧ ಸಾರ

*

ಸ್ಥಾಪಕರು

ಸಂಚಾಲಕರು ಮತ್ತು ಪ್ರಕಾಶಕರು :

ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು

ಶ್ರೀ ಮ. ನಿ. ಜ. ಮುರುಘರಾಜೇಂದ್ರ ಪ್ರಸಾದನಿಲಯ

ಶ್ರೀ ಮುರುಘಾಮಠ, ಹಾವೇರಿಪೇಟೆ, ಧಾರವಾಡ

ಸಂಗ್ರಾಹಕರು :

ಶ್ರೀ ಹರ್ಡೇಕರ ಮಂಜಪ್ಪನವರು

*

೧೯೫೫ ಬೆಲೆ : ೧-೮-೦

ಪ್ರಕಾಶಕರು :
ಶ್ರೀಮ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು
ಶ್ರೀ ಮುರುಘಾಮಠ, ಹಾವೇರಿಪೇಟೆ
ಮಠ ನಂ. ೭೬೬೮
ಧಾರವಾಡ

ಪ್ರಥಮ ಮುದ್ರಣ—೧೯೪೦
ದ್ವಿತೀಯ ಮುದ್ರಣ—೧೯೫೧
ತೃತೀಯ ಮುದ್ರಣ—೧೯೫೫



ಮುದ್ರಕರು :
ಬಿಳಗಿ ರಾಮಣ್ಣನವರು
ಲಿಂಗರಾಜ ಆರ್ಟ ಪ್ರೆಸ್
ಮನೆ ನಂ. ೨೨೦
ಮಾಳಮಡ್ಡಿ, ಧಾರವಾಡ



ಶ್ರೀ. ಮ. ನಿ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು
ಗಚ್ಚಿನಮಠ, ಅಥಣಿ

# ಅರ್ಪಣೆ

ಶಿವಶರಣರ ಘನವಾದ ಮಾರ್ಗದಲ್ಲಿ ನಡೆದು

ಶಿವಯೋಗ ತಪಸ್ಸನ್ನಾಚರಿಸಿದ

ಪರಮವೈರಾಗ್ಯಮೂರ್ತಿಗಳೂ ಕಾರಣಪುರುಷರೂ

ಆದ

ಅಥಣಿ ಗಚ್ಚಿನಮಠದ

ಲಿಂಗೈಕ್ಯ

ಶ್ರೀ ಮನ್ನಿರಂಜನ ಪ್ರಣವಸ್ವರೂಪ

**ಮುರುಘೇಂದ್ರ ಮಹಾಶಿವಯೋಗಿಗಳ**

ದಿವ್ಯ ಪಾದಾರವಿಂದಗಳಿಗೆ

ಈ ಗ್ರಂಥವನ್ನು ಭಕ್ತಿಪುರಸ್ಸರವಾಗಿ

ಸಮರ್ಪಿಸಲಾಗಿದೆ

# ಮುನ್ನುಡಿ

ಲಿಂಗೈಕ್ಯ ಶ್ರೀಮದಥಣಿ ಮುರುಘೇಂದ್ರ ಮಹಾಶಿವ ಯೋಗಿಗಳವರ ಸ್ಮರಣಾರ್ಥವಾಗಿ ಪ್ರಾರಂಭಿಸಿದ ಶ್ರೀ ಬಾಲ ಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ಶ್ರೀ ಮುಪ್ಪಿನ ಷಡಕ್ಷರಿ ಸ್ವಾಮಿಗಳು ನಿರೂಪಿಸಿದ "ಸುಬೋಧ ಸಾರ ಗ್ರಂಥವು" (ಕೈವಲ್ಯವು) ಹತ್ತನೆಯದಾಗಿದೆ.

ಈ ಗ್ರಂಥವನ್ನು ೧೯೪೦ ರಲ್ಲಿ ಶರಣಸಂದೇಶ ಪತ್ರಿಕಾ ಸಂಪಾದಕರೂ ಸಮಾಜ ಸುಧಾರಕರೂ ಸುಪ್ರಸಿದ್ಧ ವಾಙ್ಮಯಿಗಳೂ ಆದ ಶ್ರೀ ಹರ್ಡೇಕರ ಮಂಜಪ್ಪನವರು ಬಹು ಪರಿಶ್ರಮ ಪಟ್ಟು ಆಲಮಟ್ಟಿ ವೀರಶೈವ ವಿದ್ಯಾಲಯದಿಂದ ಪ್ರಸಿದ್ಧಿಸಿದರು. ಅವರು ಸಂಪಾದಿಸಿ ಸಂಗ್ರಹಿಸಿದ ಆವೃತ್ತಿಯನ್ನೇ ಪುನಃ ಕ್ರಿ. ಶ. ೧೯೫೧ ರಲ್ಲಿ ಎರಡನೆಯ ಮುದ್ರಣಗೊಳಿಸಿ ಪ್ರಕಟಿಸಿದೆವು. ಹಾಡುಗಬ್ಬಗಳ ಹಾಗೂ ಕೈವಲ್ಯ ಸಾಹಿತ್ಯದ ಅಭಿರುಚಿಯು ಸಾರ್ವಜನಿಕವಾಗಿ ವಾಚಕವೃಂದದಲ್ಲಿ ಹೆಚ್ಚಾಗಿರುವ ಕಾರಣ ಮತ್ತೆ ಈಗ ಮೂರನೆಯ ಮುದ್ರಣಗೊಳಿಸುವ ಸುಯೋಗ ಬಂದಿರುವುದಕ್ಕೆ ಅಭಿಮಾನವೆನಿಸಿದೆ.

ಸುಬೋಧಸಾರದ ಎರಡನೆಯ ಹಾಗೂ ಮೂರನೆಯ ಮುದ್ರಣದ ಕಾಲಕ್ಕೆ ಉಜ್ವಲ ಸಾಹಿತ್ಯಪ್ರೇಮಿಗಳೂ ಸಮಾಜ ಸೇವಾ ಸಕ್ತರೂ ನಿವೃತ್ತ ನ್ಯಾಯಾಧೀಶರೂ ಆದ ಶ್ರೀಮಾನ್ ಹಾಲಭಾವಿ ವೀರಭದ್ರಪ್ಪನವರು ತಮ್ಮ ಇಳಿ ವಯಸ್ಸಿನಲ್ಲಿಯೂ ಸಹ ಶುದ್ಧವಾಗಿ ತಿದ್ದಿಕೊಡುವದರಲ್ಲಿ ಉತ್ಸಾಹಭರಿತರಾಗಿ ಸೇವೆ ಸಲ್ಲಿಸಿದುದು ಆದರ್ಶವೂ ಅಭಿನಂದನೀಯವೂ ಆಗಿದೆ.

ಅದರಂತೆ ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪ್ರಚಾರಾಧಿಕಾರಿಗಳೂ ಪ್ರಸಿದ್ಧ ಸಾಹಿತಿಗಳೂ ಆದ ಶ್ರೀ ಮಲ್ಲಾಬಾದಿ ವೀರಭದ್ರಪ್ಪನವರೂ ಸಹ ಮೂರನೆಯ ಮುದ್ರಣದ ಪರಿಷ್ಕರಣ ಕಾರ್ಯದಲ್ಲಿ ನೆರವಾಗಿ ಸೇವೆಯನ್ನು ಸಲ್ಲಿಸಿದರು. ಈ ಮುದ್ರಣಕ್ಕೆಂದು ಶ್ರೀ ಕಾವ್ಯಾನಂದರು (ವಿದ್ಯಾರತ್ನ ಪುರಾಣಿಕ ಸಿದ್ಧಯ್ಯಸ್ವಾಮಿ, ಬಿ.ಎ.ಎಲ್‌ಎಲ್.ಬಿ. ಹೈದರಾಬಾದ) ಹಿನ್ನುಡಿ ಎಂದು ವಿಶೇಷವಾಗಿ ಬರೆದ ಲೇಖನ ವನ್ನು ಹಾಗೂ ಈ ವರ್ಷ ಕರ್ನಾಟಕ ವಿಶ್ವವಿದ್ಯಾನಿಲಯ ದಲ್ಲಿ ಎಮ್. ಎ. ಪರಿಕ್ಷೆಗಾಗಿ ಓದುತ್ತಿರುವ ವಿದ್ಯಾರ್ಥಿಯೂ ಮಲ್ಲಾಬಾದಿ ವೀರಭದ್ರಪ್ಪನವರ ಅಳಿಯನೂ ಆದ ಶ್ರೀ ಬಸವ ರಾಜ ಚನ್ನವೀರಪ್ಪಾ ಜವಳಿ ಈತನು ಈ ಗ್ರಂಥಕ್ಕಾಗಿಯೇ ಭಕ್ತಿಶ್ರದ್ಧೆಯನ್ನಿಟ್ಟು ಅಭ್ಯಾಸ ಮಾಡಿ ಬರೆದ "ಶಿವಯೋಗಿ ಕವಿ ಮುಪ್ಪಿನ ಷಡಕ್ಷರಿದೇವ" ಎಂಬ ವಿಶೇಷ ಲೇಖನವನ್ನು ಸಹ ಈ ಆವೃತ್ತಿಯಲ್ಲಿ ಅಣಿಗೊಳಿಸಿ ಪ್ರಕಟಿಸಲು ನಮಗೆ ವಿಶೇಷ ಆನಂದವಾಗಿದೆ.

ಲಿಂಗರಾಜ ಮುದ್ರಣಾಲಯದ ಒಡೆಯರಾದ ಬಿಳಗಿ ಬಂಧುಗಳು ಅನೇಕ ಕಾರ್ಯಗಳಿದ್ದರೂ ಎಲ್ಲವನ್ನು ಬಿಟ್ಟು ಸ್ವಾಮಿಕಾರ್ಯವೆಂದು ಭಾವಿಸಿ ಬಹು ಶ್ರದ್ಧೆಯಿಂದ ಅಂದ ವಾಗಿ ಮುದ್ರಣ ಮಾಡಿಕೊಟ್ಟರು.

ಶ್ರೀ ಶಿವಯೋಗೀಶ್ವರನು ಸರ್ವರೀತಿಯಿಂದಲೂ ಸೇವೆ ಸಲ್ಲಿಸಿದ ಸರ್ವರಿಗೂ ಮಂಗಲವನ್ನೀಯಲೆಂದು ಹಾರೈಸುತ್ತೇವೆ.

ಶ್ರೀ ಮುರುಘಾಮಠ
ಹಾವೇರಿಪೇಟೆ, ಧಾರವಾಡ
ಶ್ರಾ. ಶು. ೧. ಶಕ ೧೮೭೭
ತಾ. ೨೦-೭-೧೯೫೫

ಪ್ರಕಾಶಕರು

# ಪರಿವಿಡಿ


| | | ಪುಟ |
|---|---|---|
| ಮುನ್ನುಡಿ | | |
| ಪ್ರಸ್ತಾವನೆ (ಹಿನ್ನುಡಿ ಸಮೇತ) | | ೧-೧೮ |
| ಶಿವಯೋಗಿ ಕವಿ ಮುಪ್ಪಿನ ಷಡಕ್ಷರಿದೇವ | | ೧೯-೨೭ |
| ನನ್ನದೊಂದು ಅರಿಕೆ | | ೨೯-೩೦ |
| ಸುಬೋಧ ಸಾರ | | ೧-೧೩೨ |
| ೧ | ನೀನೆ ಅಕಳಂಕ ಗುರು | ೧ |
| ೨ | ಎನ್ನ ಕರೆಯ ಬನ್ನಿ | ೨ |
| ೩ | ನಿಮ್ಮನು ನೆನೆವ ಮನವ ಬಯಸುವೆನು | ೬ |
| ೪ | ಎನ್ನ ಕರದೊಳಗಿರ್ದು ಏಕೆ ನುಡಿಯೆ | ೭ |
| ೫ | ಎಲೆ ಆತ್ಮನೆ | ೧೦ |
| ೬ | ಎನ್ನ ಬರಿಸದಿರು | ೧೧ |
| ೭ | ಕೇಳಕ್ಕ | ೧೩ |
| ೮ | ಮಾಯೆ ನೀನತಿ ಚೆಲುವೆ | ೧೫ |
| ೯ | ಇನ್ನೆನಗೆ ಭಯವುಂಟೆ | ೧೬ |
| ೧೦ | ಲಿಂಗವೆ | ೧೮ |
| ೧೧ | ಉಳುಹಿರಯ್ಯ | ೨೦ |
| ೧೨ | ಸರ್ವಾಂಗವನು ಸಲಿಸುವೆನು | ೨೨ |
| ೧೩ | ಶಿವನೊಳಗೆ ಮೋಹವಿರೆ ತಾನೆ ಶಿವನು | ೨೪ |
| ೧೪ | ವರವ ಬೇಡುವೆನೊಂದ | ೨೬ |
| ೧೫ | ಎಲ್ಲರಲಿ ಒಂದೊಂದ ಬೇಡಿಕೊಂಬೆ | ೨೭ |

| | | ಪುಟ |
|---|---|---|
| ೧೬ | ಮುಂದೆ ಏನಪ್ಪುದೋ | ೨೯ |
| ೧೭ | ಮಗಳೆ ಎನ್ನಯ ಮಾತು ಕೇಳು | ೩೧ |
| ೧೮ | ನಮಗೆ ಸರಿಯುದಾರು | ೩೧ |
| ೧೯ | ಹೆದರಿ ನುಡಿಯುಲಮ್ಮೆನು | ೩೩ |
| ೨೦ | ವಿಕಸವಾಗಲಿ | ೪೦ |
| ೨೧ | ಭಜತಿಯುರರೆ ವಿಷ್ಣುವಾಯು | ೪೧ |
| ೨೨ | ಮನದ ಒಲುಮೆ ಎಂದಿಗಪ್ಪುದೋ | ೪೩ |
| ೨೩ | ಮನವನಿಡಲಿಕಾಗದು | ೪೫ |
| ೨೪ | ಕಿವಿಯನೊಡ್ಡಿ ಕೇಳಲಾಗದು | ೪೭ |
| ೨೫ | ನಿಮ್ಮ ನಿಜಪದ | ೪೯ |
| ೨೬ | ಭೋಗ ಹರಿದು ಹೋಗಲಿ | ೫೦ |
| ೨೭ | ಭಕ್ತಹೃದಯವಾಸ | ೫೨ |
| ೨೮ | ಏನಸೋದಿ ಏನು ಫಲ | ೫೩ |
| ೨೯ | ಎನಗೆ ದೊಡ್ಡಿತೆ | ೫೪ |
| ೩೦ | ನಿಮ್ಮನರಿಯುದೆ | ೫೬ |
| ೩೧ | ಧರೆಯ ಭೋಗವಸ್ಥಿರ | ೫೭ |
| ೩೨ | ಎಂದಿಗಪ್ಪುದೋ | ೫೯ |
| ೩೩ | ಸಿರಿಯು ಕನಸಿನಂತೆ | ೬೦ |
| ೩೪ | ಕಾಯಮೋಹವನ್ನು ಮರೆ | ೬೩ |
| ೩೫ | ಕೋಪವೆನಗೆ ಲೋಪವಾಗದು | ೬೫ |
| ೩೬ | ಎನಗೆ ಭೋಗ ಭಾಗ್ಯ ಬೇಡ | ೬೬ |
| ೩೭ | ಡಿಂಭದೊಳಗೆ ಒಂದು ಪ್ರಾಣ | ೬೮ |
| ೩೮ | ಹಿರಿದು ಕಿರಿದು ಇಲ್ಲ | ೬೯ |

| | | ಪುಟ |
|---|---|---|
| ೩೯ | ನಾನು ಒಲಿದು ಫಲವದೇನು | ೭೧ |
| ೪೦ | ಪನ್ನಗೇಂದ್ರಭರಣ | ೭೩ |
| ೪೧ | ನಿನ್ನ ನೀನೆ ತಿಳಿದು ನೋಡು | ೭೪ |
| ೪೨ | ನಿಮ್ಮ ಹಾಗೆ ಕಾಂಬೆನಯ್ಯ | ೭೬ |
| ೪೩ | ನನ್ನ ಮೇಲೆ ಹಗೆಯೇಕೆ | ೭೮ |
| ೪೪ | ಮನವನಾಳ್ವರಾರ ಕಾಣೆನು | ೭೯ |
| ೪೫ | ಏನು ಮಾಡಲಯ್ಯ | ೮೧ |
| ೪೬ | ಕಾಡಲೇಕೆ ನರರುಗಳನು | ೮೨ |
| ೪೭ | ವಿರತಿ ಸುಲಭವಲ್ಲವಯ್ಯ | ೮೩ |
| ೪೮ | ನೀನು ರಕ್ಷಿಸಭವ | ೮೪ |
| ೪೯ | ಎಂದಿಗಪ್ಪುದೊ | ೮೬ |
| ೫೦ | ನಿತ್ಯ ಸುಖಿಯಾಗು | ೯೦ |
| ೫೧ | ಎಂದಿಗಾದಪುದೊ | ೯೩ |
| ೫೨ | ಎಂದಿಗೊಲಿದಪನೋ | ೯೫ |
| ೫೩ | ಲಿಂಗವು ಇರಲು ಶಿವ | ೯೭ |
| ೫೪ | ಕರುಣಿ ಎಂತಹನು | ೯೯ |
| ೫೫ | ನರರಿಗೆಂತಹುದು | ೧೦೧ |
| ೫೬ | ಎಂದಿಗಹುದೋ | ೧೦೩ |
| ೫೭ | ಒಡಲು ಹಿಡಿದ ಜಡನು ನಾನು | ೧೦೪ |
| ೫೮ | ಎಂದಿಗೆ ದೊರಕುವದು | ೧೦೬ |
| ೫೯ | ಏತರ ಭಯವೆಮಗೆ | ೧೦೮ |
| ೬೦ | ಶಿವಯೋಗದೊಳೆಂದಿಹೆನೋ | ೧೦೯ |
| ೬೧ | ಧ್ಯಾನದೊಳೆಂದಿಹೆನೋ | ೧೧೧ |
| ೬೨ | ಎನ್ನಪರಾಧವ ನೋಡದೆ ರಕ್ಷಿಸು | ೧೧೨ |

ಪುಟ


| | | |
|---|---|---|
| ೬೩ | ಯುಗವನಂತವು ಹಿಂಗುತಿವೆ | ೧೧೫ |
| ೬೪ | ದೇವತ್ವವಾವುದು | ೧೧೭ |
| ೬೫ | ತನ್ನ ನಾವು ಏನು ಬೇಡಿದೆವು | ೧೧೮ |
| ೬೬ | ಮೋಹವಿಲ್ಲದ ಪೂಜೆ | ೧೧೯ |
| ೬೭ | ಬಂದನು ಮರ್ತ್ಯಕೆ | ೧೨೦ |
| ೬೮ | ಆರು ಕಾಣರು ಪುಣ್ಯಕ್ಷೇತ್ರವನು | ೧೨೧ |
| ೬೯ | ಕಾಯ್ಯೊ ಕಾಯ್ಯೊ | ೧೨೨ |
| ೭೦ | ನಮ್ಮ ದೇಶಕೆ ಹೋಹದಿನ ಬಂತು | ೧೨೩ |
| ೭೧ | ಸೆರನೊಡ್ಡಿ ಬೇಡಿಕೊಂಬೆನು | ೧೯೪ |
| ೭೨ | ತಂದು ತೋರೆ | ೧೨೫ |
| ೭೩ | ಹೇವವನಿಕ್ಕಲಾರೆ | ೧೨೬ |
| ೭೪ | ಹಾರು ಕಂಡ್ಯಾ ಹಂಸ | ೧೨೭ |
| ೭೫ | ಶಿವಯೋಗಾಷ್ಟಕ | ೧೨೮ |
| ೭೬ | ಶಿವಪೂಜಾಷ್ಟಕ | ೧೩೦ |

ಕಠಿಣ ಶಬ್ದಗಳ ಕೋಶ ೧೩೫-೧೩೬


* * *

॥ ಶ್ರೀ ಶರಣ ॥

# ಪ್ರಸ್ತಾವನೆ

## (ಮೊದಲನೆಯ ಮುದ್ರಣ)

ಕೆಲ ದಿನಗಳ ಹಿಂದೆ ಆರೋಗ್ಯ ನಿಮಿತ್ತವಾಗಿ ಆಲಮಟ್ಟಿಯಲ್ಲಿದ್ದಾಗ ಕನ್ನಡ ನಾಡುನುಡಿಗಳ ಬಹುಮುಖಸೇವೆಯ ಶ್ರೀಮಾನ್ ಮಂಜಪ್ಪಣ್ಣನವರು ಋಷಿಕವಿಯಾದ ಮುಪ್ಪಿನ ಷಡಕ್ಷರಿ ಯತಿಯ ಹಾಡುಗಬ್ಬಗಳ ಸಂಕಲನ ಸಂಶೋಧನ ಕಾರ್ಯತತ್ಪರರಾಗಿದ್ದರು. ಅವರಿತ್ತ ಆಣತಿಯಂತೆ ನಾನೂ ಆ ಕಾರ್ಯದಲ್ಲಿ ನನ್ನ ಅಳಿಲು ಸೇವೆಯನ್ನು ಸಲ್ಲಿಸಿದೆನು. ಸಾಮಾನ್ಯವಾಗಿ ತಾವು ಬರೆದು ಪ್ರಕಟಿಸಿದ ಗ್ರಂಥಗಳಿಗೆ ಹಿರಿಯರಿಂದ ಮುನ್ನುಡಿ ಬರೆಯಿಸುವದು ಈಗಿನ ಸಂಪ್ರದಾಯ. ಹಿರಿಯರಾದ ತಮ್ಮ ಪ್ರಕಟನೆಗೆ ಕಿರಿಯನಾದ, ಸಾಹಿತ್ಯ ಕ್ಷೇತ್ರದಲ್ಲಿ ಹೊಸಬನಾದ, ನನ್ನಿಂದ ಮುನ್ನುಡಿ ಬರೆಯಿಸುವದು ಪ್ರತಿ ಮಾತಿನಲ್ಲಿಯೂ ಹೊಸತನವನ್ನು ಹುಡುಕುವ ಶ್ರೀ ಮಂಜಪ್ಪಣ್ಣನವರ ಸಂಪ್ರದಾಯ ! ನಾನವರಿಗೆ ಎದೆದುಂಬಿ, ತಲೆವಾಗಿ ನಿಯಮಿಸಿದ ಸೇವೆಯನ್ನು ಸಲ್ಲಿಸುವೆ.

ವಿಸ್ತಾರ, ವೈವಿಧ್ಯ, ವಿಪುಲತೆ, ವಿಚಾರವೈಶಾಲ್ಯ, ವೈಶಿಷ್ಟ್ಯ, ನಾವೀನ್ಯ, ನಿರ್ದುಷ್ಟ, ಉದಾತ್ತ ಉದ್ದೇಶಗಳ ಮೂಲಕ ವೀರಶೈವ ಸಾಹಿತ್ಯಕ್ಕೆ ಕನ್ನಡ ಸಾಹಿತ್ಯದಲ್ಲಿ ಉಚ್ಚವಾದ ಉನ್ನತವಾದ ಸ್ಥಾನವಿದೆ, ಮಾನವಿದೆ, ಮನ್ನಣೆಯಿದೆ. ಪ್ರಸಿದ್ಧ

ಸಾಹಿತಿಗಳಾದ ಶ್ರೀ ಅ. ನ. ಕೃಷ್ಣರಾಯರು ಹೇಳುವಂತೆ, "ಮಾನವನ ಸಂಸ್ಕೃತಿಯನ್ನು ಉಚ್ಚಗೊಳಿಸಿ, ಮಾನವನನು ಉನ್ನತಪಿಹಾರ, ಉತ್ತಮ ವಿಚಾರಗಳಲ್ಲಿ ಲೀನನನ್ನಾಗಿ ಮಾಡು ವದೇ ಸಾಹಿತ್ಯದ ಉದ್ದೇಶವೆಂದು ಒಪ್ಪಿಕೊಂಡರೆ ವೀರಶೈವ ಸಾಹಿತ್ಯಕ್ಕೆ ಆ ಕೀರ್ತಿಯು ಯಥೇಚ್ಛವಾಗಿ ಸಲ್ಲುತ್ತದೆ." ಕೈವಲ್ಯಗಳ ಸಾಹಿತ್ಯ ಅಥವಾ ಶರಣಸಾಹಿತ್ಯವು ವೀರಶೈವ ಸಾಹಿತ್ಯ ಕಲ್ಪಕುಜದ ಕುಸುಮಶೋಭಿತ ಶಾಖೆಯೊಂದು.

## ಉಗಮ

ಹಂಪೆಯ ಹರಿಹರನ ಹೇಳಿಕೆಯಂತೆ ವಚನಗಳೂ ಹಾಡು ಗಬ್ಬಗಳಾಗುತ್ತವೆ; 'ಬಸವನ ಗೀತೆ' ಎಂಬ ವಾಕ್ಯದಲ್ಲಿ ವಚನಗಳು ಸಂಗೀತಸಾಹಿತ್ಯಗಳ ಸಂಗಮವೆಂಬರ್ಥವೇ ಧ್ವನಿತ ವಾಗುತ್ತದೆ. ವೀರಶೈವ ವೇದವ್ಯಾಸನಾದ ಪಾಲ್ಕುರಿಕೆ ಸೋಮ ನಾಥನು ಬಸವಣ್ಣನವರನ್ನು 'ಕವಿಪಂಡಿತ ಗಾಯಕಚಕ್ರವರ್ತಿ' ಎಂದು ಸಂಬೋಧಿಸಿದ್ದಾನೆ. ಪೂರ್ವದಿಂದಲೂ ವಚನಗಳನ್ನು ಹಾಡುವ ಪರಿಪಾಠವಿದೆಯೆಂದು ಶ್ರೀ ಡಿ. ಎಲ್. ನರಸಿಂಹಾ ಚಾರ್ಯರು ಪ್ರಬುದ್ಧ ಕರ್ನಾಟಕದಲ್ಲಿ ಬರೆಯುತ್ತಾರೆ. ಸ್ವತಃ ಹರಿಹರನೇ ತನ್ನ 'ಶರಣರಗಳೆ' ಮಹಾಕಾವ್ಯದ ಪೂರ್ವ ಪೀಠಿಕೆ ಯಂತಿರುವ ಲಿಂಗಾರ್ಚನೆ ರಗಳೆಯಲ್ಲಿ :

ಲಲಿತ ಬಂಗಾಳದಿಂದೊಲಿದು ನಿಮ್ಮಂ ಹಾಡಿ
ಮಲಹರಿ ವರಾಳಿಯಿಂದೊಲಿದು ನಿಮ್ಮಂ ಹಾಡಿ
ದೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ
ದೇಶಾಕ್ಷಿ ಗೌಳದಿ ಮಹೇಶ ನಿಮ್ಮಂ ಹಾಡಿ

ಎಂದು ತನ್ನ ರಗಳೆಗಳ ಸಂಗೀತ ಪೂರ್ಣತೆಯನ್ನು ತಿಳಿಸಿ ದ್ದಾನೆ. ಷಟ್ಪದೀ ಸಂಪ್ರದಾಯ ಸಂಸ್ಥಾಪಕನಾದ ರಾಘವಾಂಕ

ನಂತೂ ಕನ್ನಡ ಸಂಗೀತದ ಪಡಿಯಚ್ಚಿನಲ್ಲಿ ಷಟ್ಪದಿ ಸಾಹಿತ್ಯದ ಎರಕವನ್ನು ಹೊಯ್ದು ಕನ್ನಡ ಸಾಹಿತ್ಯವನವನ್ನು ಷಟ್ಪದಿಯ ಝೇಂಕಾರದಿಂದ ತುಂಬಿ ಬಿಟ್ಟನು. ಆದರೆ ಶರಣಸಾಹಿತ್ಯಕ್ಕೆ ಸ್ವತಂತ್ರ ಸುವ್ಯವಸ್ಥಿತ ಸ್ವರೂಪವು ಬಂದದ್ದು ಕನ್ನಡ ಸಾಹಿತ್ಯದ ಸೀಮಾಪುರುಷರಾದ ನಿಜಗುಣ ಶಿವಯೋಗಿಗಳಿಂದ. ಅವರೇ ಈ ನವೀನ ಸಾಹಿತ್ಯ ಸಂಪ್ರದಾಯದ ದೀಕ್ಷಾಚಾರ್ಯರು. ಸಾಹಿತ್ಯದಲ್ಲಿ ಹೊಸದೊಂದು ಸಂಪ್ರದಾಯವನ್ನು ಸಂಸ್ಥಾಪಿಸಲು ಬೇಕಾಗುವ ಅದ್ಭುತ ಶಕ್ತಿ, ಅಪೂರ್ವ ಪ್ರತಿಭೆ, ಅಸಾಧಾರಣ ವ್ಯಕ್ತಿತ್ವಗಳು ಅವರಲ್ಲಿದ್ದವು. ಅಂತೆಯೇ ಈ ಸಂಪ್ರದಾಯದ ಕೊನೆಯ ಕಬ್ಬಿಗರಾದ ಸೋಮೇಕಟ್ಟೆ ಕರಿವೃಷಭೇಂದ್ರರು ನಿಜಗುಣರನ್ನು ಮನವಾರೆ ಕೀರ್ತಿಸಿದ್ದಾರೆ.

## ವಾಙ್ಮಯ ವಿಸ್ತಾರ

·ನಿಜಗುಣರಲ್ಲಿ ಉಗಮ ಹೊಂದಿದ ಶರಣಸಾಹಿತ್ಯ ವಾಹಿನಿಯು ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿ, ಘನಮಠದಾರ್ಯರು, ಬಾಲಲೀಲಾ ಮಹಾಂತ ಶಿವಯೋಗಿಗಳು, ಮೈಲಾರ ಬಸಪ್ಪನವರು, ರಘೋದ್ಧರಣೆಯ ಸಂಗನ ಬಸವೇಶ್ವರರು, ಏಕೋತ್ತರ ಶತಸ್ಥಲದ ಸಿದ್ಧಲಿಂಗೇಶ್ವರ, ಕಡಕೋಳದ ಮಡಿವಾಳಪ್ಪನವರು, ಮುತುಕೂರು ನಂಜುಂಡ ಶಿವಯೋಗಿಗಳು, ಕರಿವೃಷಭೇಂದ್ರರಲ್ಲಿ ಬೆಳೆದು, ಬಲಿತು, ವಿಸ್ತಾರವಾಗಿ, ವಿಶಾಲವಾಗಿ, ಪ್ರಶಾಂತಗಂಭೀರ ಗತಿಯಲ್ಲಿ ಪ್ರವಹಿಸುವ ಪುಣ್ಯಪಾವನ ಗಂಗೆಯಾಗಿ ಪರಿಣಮಿಸಿದೆ. ಕಾಲಕ್ರಮದಲ್ಲಿ ಹೆಚ್ಚು ಹೆಚ್ಚು ಸಾಹಿತ್ಯ ಸಂಶೋಧನೆ ನಡೆದಂತೆ ಈ ಶರಣಕವಿಗಳ ಸಂಖ್ಯೆ ಇಮ್ಮಡಿಯಾಗುವದರಲ್ಲಿ ಸಂದೇಹವಿಲ್ಲ.

# ವಿಚಾರ ವೈಶಾಲ್ಯ

ಶರಣರಲ್ಲಿ ಕುಲದ ಛಲವಿಲ್ಲ; ಜಾತಿಯ ಸೂತಕವಿಲ್ಲ; ಪಕ್ಷಪಂಥಗಳ ಕೋಲಾಹಲವಿಲ್ಲ. ಅವರದು ವಿಶ್ವವ್ಯಾಪಕ ದೃಷ್ಟಿ. "ಸಮಸ್ತ ಜಾತಿಯ ಜಾಲವನು ಸರ್ವರನು ಕರುಣಿಸಿ ಪೊರೆಯುವ" ಹೃದಯ ವೈಶಾಲ್ಯ ಅವರದು. ಮುಪ್ಪಿನ ಷಡಕ್ಷರಿಯ ಹಾಡನ್ನು ಕೇಳಿ !

ಅವರವರ ದರುಶನಕೆ । ಅವರವರ ವೇಷದಲಿ ।
ಅವರವರಿಗೆಲ್ಲ ಗುರುವು ನೀನೊಬ್ಬನೆ ॥
ಅವರವರ ಭಾವಕ್ಕೆ । ಅವರವರ ಭಕ್ತಿಗೆ ।
ಅವರವರಿಗೆಲ್ಲ ದೇವ ನೀನೊಬ್ಬನೆ ! ॥
ಹೋರಾಟವಿಕ್ಕಿಸಲು । ಬೇರಾದೆಯಲ್ಲದೆ ।
ಬೇರುಂಟೆ ಜಗದೊಳಗೆ ಎಲೆ ದೇವನೆ ! ॥

ಎಂಥ ಉನ್ನತ ವಿಚಾರ, ಉದಾತ್ತಭಾವ, ವಿಶಾಲ ಹೃದಯ ! ಇದೇ ಅರ್ಥದ ಮಹಾಂತ ಶಿವಯೋಗಿಗಳ ಗೀತೆಯನ್ನು ಆಲಿಸಿ !

ರಾಗ : ದ್ವಿಜಾವಂತಿ

ಅವರವರ ಭಕ್ತಿಗೆ ಅವರವರ ಭಾವಕ್ಕೆ
ಅವರವರ ತೆರನಾಗಿ ಇರುತಿಹನು ಶಿವಯೋಗಿ ! ॥
ಇರದೊಂದು ಕನ್ನಡಿಯ ನೂರಾರು ಜನ ಹಿಡಿಯೆ ।
ಸರಳಾಗಿ ಅವರವರ ರೂಪು ಕಾಣುವಂತೆ ॥
ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ ।
ನರರೇನು ಭಾವಿಸುವರದರಂತೆ ತೋರುವನು ! ॥

ಇದೇ ಸಂದರ್ಭದಲ್ಲಿ ಸಪ್ಪಣ್ಣಾರ್ಯರ ಅಮೃತವಾಣಿಯನ್ನು ಲಾಲಿಸಿ !

ರಾಗ : ಸಾರಂಗ

ಆ ದೇವನ ಪದ ಪದ್ಮವನಾವಗಮಭಿವಂದಿಸುವೆ ।
ಮೂದೇವರ ನಾಮಕ್ರಿಯೆ ರೂಪಗಳಳಿದುಳಿದ ॥

ಇಂಥ ಆದಿ ಅನಾದಿ ಇಲ್ಲದ, ಸುರಾಳ ನಿರಾಳವಿಲ್ಲದ, ಶೂನ್ಯ ನಿಶ್ಶೂನ್ಯವಿಲ್ಲದ, ನಾಮರೂಪಕ್ರಿಯೆಗಳಿಲ್ಲದ, ವಿಶ್ವಾತ್ಮನನ್ನು ಸರ್ವಾಂತರ್ಯಾಮಿಸರ್ವೇಶನನ್ನು ಅನನ್ಯಭಾವದಿಂದ ಶರಣುಹೊಕ್ಕ ಶಿವಶರಣರಲ್ಲಿ ಜಾತಿಭಾವದ ಸಂಕುಚಿತ ವಿಚಾರಗಳಿಗೆ ಆಸ್ಪದವಿಲ್ಲ, ಇಷ್ಟೇ ಅಲ್ಲ. ಬೆಳಗಿನೊಳಗಣ ಮಹಾಬೆಳಗಾದ ಪರಮಾತ್ಮನ ಪ್ರಕಾಶವನ್ನರಿಯುವದು ಕುಲದ ಛಲನಿರ್ನಾಮವಾದಲ್ಲದೆ ಅಸಂಭವ ಅಶಕ್ಯವೆಂದೇ ಅವರು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಇದೋ ಕೇಳಿ !

ಕುಲದ ಛಲ ಹಿಡಿದಿರುವ ಕಲಕುಮನದವರಲ್ಲಿ
ತಿಳಿವೆಳಕ ಶಿವಚಂದ್ರ ಕಾಣ್ಬ ಪರಿಯೆಂತು ?
ಕುಲಛಲವನತಿಗಳೆದ ತಿಳಿಯ ಮನದವರಲ್ಲಿ
ಸಲೆ ಮಹಂತಲಿಂಗ ಚಿತ್ಸೂರ್ಯ ಕಾಣುವನು ! ॥

ಜಾತಿ ಜಾತಿಗಳ ದ್ವಂದ್ವ ಹೋರಾಟ ನಡೆದು, ಪಂಥಪಂಥಗಳ ಘರ್ಷಣದಿಂದ ಹುಟ್ಟಿರುವ ದಾವಾನಲವು ಜನಾಂಗವನ್ನೇ ಭಸ್ಮೀಭೂತವನ್ನಾಗಿ ಮಾಡುತ್ತಿರುವ ನೈತಿಕ ದಿವಾಳಿಯಲ್ಲಿ ಸದ್ಗುಣ ಸದಾಚಾರಗಳು ಮಂಜಿನಂತೆ ಮಾಯವಾಗಿ ವಿಶ್ವದಲ್ಲಿ ರಾಕ್ಷಸೀ ಲಾಲಸೆಯ ಮೂಲಕ ಅಶಾಂತಿಪರ್ವವು ನೆಲೆಗೊಂಡ

ಈ ಕಾಲದಲ್ಲಿ, ಆಧ್ಯಾತ್ಮಿಕ ಅನುಭಾವ ಪರಿಮಳವನ್ನು ಹೊರ ಸೂಸುವ, ಬುದ್ಧಿ ಹೃದಯಗಳಿಗೆ ಬೆಳಕು ಶಾಂತಿಗಳನ್ನೀಯುವ, ಜಾತಿ ವೈಷಮ್ಯವನ್ನು ಹೊಡೆದೋಡಿಸುವ ಶಾಂತಿಪ್ರದ ಶರಣ ಸಾಹಿತ್ಯದ ಪ್ರಸಾರ ವ್ಯಾಸಂಗಗಳು ಅದೆಷ್ಟು ಹಿತಕರ, ಪ್ರಯೋಜನಕಾರಿಯೆಂಬುದನ್ನು ಸುಜ್ಞರು ವಿಚಾರಿಸಲಿ.

## ಮುಪ್ಪಿನ ಷಡಕ್ಷರಿಯ ಮೂರ್ತಿಸ್ವರೂಪ

ಸಮಗ್ರವಾದ ಸಾದ್ಯಂತವಾದ ಜೀವನ ಚರಿತ್ರೆ ದೊರೆಯ ದಿದ್ದರೂ ಇವರ ಭಕ್ತಿಪರ, ವೈರಾಗ್ಯಬೋಧಕ ಹಾಡುಗಳಲ್ಲಿ ಇವರ ನಿರ್ಮಲ ವ್ಯಕ್ತಿತ್ವವು ಸ್ಫುಟವಾಗಿ ರೂಪುಗೊಂಡಿದೆ. ಕೀರ್ತನ ಕೇಸರಿ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಇವರನ್ನು ನಿಜಗುಣರ ಸಮಕಾಲೀನರೆಂದೂ, ಶಂಭುಲಿಂಗನ ಬೆಟ್ಟ ದಲ್ಲಿಯೇ ಇವರ ಗವಿಯಿದೆಯೆಂದೂ ಶಿವಾನುಭವದಲ್ಲಿ ಬರೆ ದಿದ್ದಾರೆ. ಇವರ ಮೊದಲನೆ ಹಾಡಿನಲ್ಲಿ ಯರಗಂಬಳಿಯ ಸಿದ್ಧಲಿಂಗರು ಇವರಿಗೆ ಶಿವತತ್ವಾನುಭವವನ್ನು ಅರುಹಿದ ಗುರು ಗಳೆಂದು ತಿಳಿಯುತ್ತದೆ. ಇದಕ್ಕಿಂತ ಹೆಚ್ಚಿಗೆ ಇವರ ಜೀವನ ಸಂಗತಿಯಾವುದೂ ತಿಳಿದಿಲ್ಲ.

ಆದರೆ ಇವರ ನಿಜವಾದ ಉಜ್ವಲವಾದ ಉನ್ನತವಾದ ವ್ಯಕ್ತಿತ್ವವು ಒಡಮೂಡಿರುವದು ಇವರ ಹಾಡುಗಳಲ್ಲಿ. 'ಧರೆಯ ಸುಖದ ಭೋಗವೆನಗೆ ಹರಿದು ಹೋಗಲಿ' ಒಡೆದ ಗಡಿಗೆ, ಹರಕು ಜೋಳಿ, ಎಡದ ಕೈಯೊಳ್ ಮುರಿದ ಕೋಲು ಇಷ್ಟೇ ಸಾಕು. ಊರನೆಲ್ಲ ತಿರಿದು ತಂದರೂ ಒಡಲಿಗಾಗದಿರಲಿ; ದಾರಿಯಲ್ಲಿ ಅರ್ಧ ಚೆಲ್ಲಿ ಹೋಗಲಿ; ಮತ್ತೆ ತಿರಿಯಲು ಹೋದರೆ

ಯಾರೂ ಇಲ್ಲವೆನ್ನಲಿ; ಇಷ್ಟಾಗದ ಹೊರ್ತು 'ಮಾರಹರನ ನೆನೆವ ಮನವಾಗದು.'

ಕಾಡಲೇಕೆ ನರರುಗಳನು? ಬೇಡಿ ಬಳಲಲೇಕೆ? ರೂಢಿ ಗೀಶನೆಮಗೆ ದೈವವಾಗಿ ಇರುತಿರೆ ಯಾರ ಹಂಗೇನು? "ಮೃಡನ ಪೂಜೆ ಮಾಡುವದಕೆ ಮಡುವಿನಗ್ಗವಣಿಗಳುಂಟು. ಒಡಲಿಗನ್ನ ದುಡಿದರುಂಟು. ಬುದ್ಧಿಯನ್ನು ಹೇಳುವದಕೆ ಆದ್ಯರುಗಳ ವಚನವುಂಟು. ಉದ್ಧರಿಸುವೊಡೆ ಶಿವನ ಮಂತ್ರ ವುಂಟು. ಇನ್ನೇನು ಬೇಕು? ಎನಗೆ ಭೋಗ ಭಾಗ್ಯ ಬೇಡ; ಎನಗೆ ಜಪವು ತಪವು ಬೇಡ; ಎನಗೆ ನಿಮ್ಮ ತೊತ್ತ ಸೇವೆ ನಿತ್ಯವಾಗಲಿ" ಇದಿಷ್ಟೇ ಕೋರಿಕೆ, ಬಯಕೆ, ಹಂಬಲ. "ಕುಟ್ಟುತ್ತ ಬೀಸುತ್ತ ನೆಟ್ಟನೇ ನನ್ನ ಒಡ ಹುಟ್ಟಿದವರನು" ಹಾಡುವದೇ ದಿನದ ಕಜ್ಜ. "ಬಂದವರ, ಬರುವವರ, ನಿಂದವರ, ನೆರೆದವರ ಕುಂದದಲೆ ತಮ್ಮವರನು" ಕೇಳುವದೆ ನಿತ್ಯದ ಹೋರೆ! ತನ್ನ ಕಾಯುವನ್ನೇ ಶಿವನ ಉನ್ನತಾಲಯ ಮಾಡಿ ತನ್ನ ಸರ್ವಾಂಗಗಳನ್ನೂ ಮನ ಪ್ರಾಣಗಳನ್ನೂ ಚನ್ನಷಡಕ್ಷರಿಗೆ ಸಮರ್ಪಿಸಿ, ಭಾವಲಿಂಗಪೂಜಾ ನಿರತನಾದ ಸರ್ವಸಂಗವಿದೂರ ವೈರಾಗ್ಯಮೂರ್ತಿ ಮುಪ್ಪಿನ ಷಡಕ್ಷರಿ. ಈ ಭಾವಲಿಂಗಾರ್ಚನೆಯ ಪೂಜಾದ್ರವ್ಯಗಳಾದರೂ ಎಂತಹವು :

ಎನ್ನ ಸಮತೆಯೆ ಜಲವು । ಎನ್ನ ಸದ್ಗುಣ ಗಂಧ ।
ಎನ್ನ ನಿತ್ಯತ್ವವೇ ಅಕ್ಷತೆಗಳು ॥
ಎನ್ನ ಜ್ಞಾನವೆ ಪುಷ್ಪ । ಎನ್ನ ಭಕ್ತಿಯೆ ಬೋನ ।
ಎನ್ನ ಮನವೇ ನಿಮಗೆ ಪೂಜಾರಿಯು ॥

ತನ್ನನ್ನು ಶರಣರ ಶಿಶುವೆಂದು ಭಾವಿಸಿ, "ಅಕ್ಕ ನಾಗಮ್ಮ ಸತ್ಯ ಚಂಗಳೆ ಚೆಲ್ವೆ! ಅಕ್ಕರೆಯ ಮಹಾದೇವಿ ಸುಗ್ಗವ್ವೆಯು!

ಚಿಕ್ಕ ಕೊಡಗೂಸಿನವರಕ್ಕರೆಯ ತೊತ್ತಿನ । ಮಕ್ಕಳೆಂದು" ತಿಳಿದು "ಅವರ ಎತ್ತಾಗಿ ಅವರ ತೊತ್ತಾಗಿ, ಅವರ ಪಶುವಾಗಿ, ಸುಖದಿಂದಿದ್ದು, ಅವರುಂಡು ಮಿಕ್ಕುದನು, ಅವರುಟ್ಟು ಬಿಟ್ಟು ದನು, ಅವರುಗಿದ ತಂಬುಲವ ಸವಿದು, ಅವರಂಗಳವ ಗುಡಿಸಿ, ಅವರ ಬಾಗಿಲ ಕಾಯ್ದು, ಅವರ ಕೀಳಿಲಿಸೇರಿಕೊಂಡಿರ್ಪ ವರವನ್ನೇ ಕೋರುವ ಶರಣಸೇವಾಭಕ್ತಿಯ ಪರಕಾಷ್ಠತೆ, ಪರಿ ಪಕ್ವತೆ, ಪರವಶತೆ, ಎಷ್ಟು! ಪಾವಿತ್ರ್ಯವೆಷ್ಟು! ಪರಿಪೂರ್ಣತೆ ಎಷ್ಟು!

ಬಸವಣ್ಣನವರಂತೆ ಭಕ್ತಿಯಿಲ್ಲದ ಬಡವ ನಾನೆಂದು ತಿಳಿದು, ಎಲ್ಲರಲ್ಲಿ ಒಂದೊಂದ ಬೇಡಿಕೊಂಡು, "ನಡೆವ ನುಡಿವ ಕೊಡುವ ಉಂಬ ಉಡುವ ತೊಡುವ ಪ್ರಾಣ ಬಿಡುವ ಸಮಯದಲ್ಲಿ ಶಿವನ ನೆನೆವ ಮನವನೆ ಬಯಸಿ; ಚೀಲ ಶುಕ್ಲ ದೊರತೆ, ಕರುಳಜಾಳಿಗೆ, ಅಘದ ಬೀಡು, ಮುಕುತಿಗೇಡು, ಜಗದಿ ಜನಿಸಿ ಕೆಡುವ ತನುವ ರಗಟೆಗಿಂತ ಕಡೆಯೆಂದು ಕಂಡು; ಹಿರಿಯರಿವರು ಕಿರಿಯರಿವರು ಅರಿಗಳಿವರು, ಮಿತ್ರ ರಿವರು, ಅರಸರಿವರು, ತಿರುಕರಿವರು ಎಂಬ ಹಿರಿದು ಕಿರಿದಿನ ಭಾವವನ್ನಿಳಿದು; ಇದುವೆ ಸುಖವು, ಇದುವೆ ದುಃಖ, ಇದುವೆ ಮೃದುವು, ಇದುವೆ ಕಠಿಣ, ಇದುವೆ ಶೀತ, ಇದುವೆ ಉಷ್ಣ ವೆಂಬ ದ್ವಂದ್ವಗಳನ್ನು ಮೀರಿ ದ್ವಂದಾತೀತನಾಗಿ; ಕರಣ ಹರಣ ವೆಲ್ಲ ಲಿಂಗಕಿರಣವಾಗಿ ಹೊರಗೆ ಮರೆದು; ಬಂದಡರಿಯದೆ, ಬೈದಡರಿಯದೆ, ನಿಂದಡರಿಯದೆ, ನೆರೆದಡಿರಿಯದೆ, ಕೊಂದಡ ರಿಯದೆ, ನಿಂತೊಡೆಲ್ಲಿಯು, ಕೂತೊಡೆಲ್ಲಿಯು, ಭ್ರಾಂತನಂದದಿ ಕಲ್ಲುಮರನಾಗಿಂತು ಪರವಶದಂಗಭಾವವನ್ನು ತಳೆದು, ಕಾಡುವ ಮಾಯೆಯ ಓಡಿಸಿ, ಭವವ ವಿಭಾಡಿಸಿ, ಕಾಲನ ನೇಡಿಸಿ, ಕಾಮನನೋಡಿಸಿ, ಮರವೆಯ ಕಾಡಿಗೆ ವನ್ಹಿಯ

ಪರಿವೇಷ್ಟಿಸಿ, ನೋಡುತ ಲಿಂಗವ, ಮೂಡುತ ಗದ್ಗದ, ಪಾಡುತ ಸುಖಜಲವಾಡುತ ನೇತ್ರದಿ—ಎಲ್ಲಿ ಮೆಚ್ಚು, ಎಲ್ಲಿ ಮೋಹ ಎಲ್ಲಿ ಪ್ರೀತಿ ಎಲ್ಲಿ ಪ್ರೇಮ ಅಲ್ಲಿ ಅವರ ವಿಕಳತೆಯುಲಿ ಸಾವತೆರದಲಿ — ಇಲ್ಲಿ ಹಿಂದು ಮುಂದ ಮರೆದು, ಅಲ್ಲಿ ಷಡಕ್ಷರಿಯ ಲಿಂಗದಲ್ಲಿ ಪ್ರಾಣಬಿಡುವ'' ಹಿರಿಯ ಹಂಬಲ, ಮನದ ಉದ್ವೇಗ, ಬಗೆಯ ಬೇಗೆ, ಬಯಕೆಯ ಕಿಚ್ಚು ಮುಪ್ಪಿನಾರ್ಯರದು !

''ಎನ್ನ ಕಂದಿಸುತ್ತ ಬಹಳ ಎನ್ನಬಾಧಿಸುತ್ತ ಬಿಡದೆ ಎನ್ನ ನೊಂದು ನೆವಗಳಿಂದ ಕಾಡಿದವರಿಗೆ ಎನ್ನ ಕೊಂದಡವರಿಗೆಲ್ಲ ಎನ್ನ ಪೂಜೆಫಲಗಳೆಲ್ಲ ಉನ್ನತದೊಳವರಿಗಾಗಿ ಸುಖದಿ ಬಾಳಲಿ'' ಎಂದು ಅಖಿಲ ಮಾನವ ಕೋಟಿಯ ಕಲ್ಯಾಣವನ್ನೇ ಕೋರಿ, ವಿಶ್ವಜೀವಿಗಳಿಗೆಲ್ಲ ಮಂಗಲವನ್ನೇ ಚಿಂತಿಸಿ, ಸಕಲ ಜೀವಾತ್ಮರಿಗೆ ಲೇಸನೆ ಬಯಸಿ; ''ಮುನ್ನ ತಾನು ಯಾರು ಎಂದು ತನ್ನ ನಿಜವನರಿತು, ಚನ್ನಷಡಕ್ಷರಿಯಲಿಂಗ ತಾನೆಯಾಗಿ, ಸರ್ವಜಗವದೆಲ್ಲ ತನ್ನ ನಿಲುವೆಯಾಗಿ; ಎನ್ನ ಮನ ಪ್ರಾಣಗಳು ಹೊನ್ನು ಹಾವುಗೆಯಾಗಿ ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ'' ಎಂದು ಹಾರೈಸಿ, ಹಂಬಲಿಸಿ, ''ಶಿವನ ನಿಜವನರಿತು ಭವದ ಕಡೆಯ ಕಂಡು'' ಕಾಲಕಾಮರನ್ನು ಗೆದ್ದ ಸರ್ವಾರ್ಪಣ ಯೋಗಿ ಷಡಕ್ಷರಿ !

ಇವರ ಹಾಡುಗಳನ್ನು ಪುನಃ ಪುನಃ ಓದಿದಂತೆ ಇವರ ಪಾವನ ಮೂರ್ತಿಸ್ವರೂಪದ ಮೆರಗು, ಉಜ್ವಲತೆ, ತೇಜಸ್ಸು ಕಾಂತಿಪ್ರಭೆಗಳು ಹೆಚ್ಚು ಹೆಚ್ಚಾಗುತ್ತವೆ; ನವೋನವ ನಿತ್ಯ ನೂತನವಾಗುತ್ತವೆ! ಇವರ ಅಪೂರ್ವಸುಂದರ ಅತೀವ ಮನೋಹರ ಸತಿಪತಿಭಾವದ ಹಾಡುಗಳನ್ನೋದಿದಾಗ ನಿಜಗುಣರಂತೆ

"ಸತಿಪತಿಗಳಿವರ ಸಮರತಿಸುಖದ ಬಾಳುವೆಗೆ ಪ್ರತಿಯುಂಟೆ ಲೋಕದೊಳು ? ನೋಡೆ ಲಲಿತಾಂಗಿ !" ಎಂದೆನ್ನಬೇಕಾಗುತ್ತದೆ. ಅಷ್ಟು ಪಾರವಶ್ಯಪೂರ್ಣ, ಭಾವನಿರ್ಭರವಾಗಿವೆ ಆ ಹಾಡುಗಳು.

## ಶೈಲಿಯ ಸೊಬಗು

"ಯೋಗಿ ನಿಜಾನಂದದೊಳು ನುಡಿಸುವ ವೀಣೆ। ರಾಗ ರಸದ ತರಂಗಿಣಿ ನೋಡು ರಮಣಿ !" ಎಂದು ಶಿವಯೋಗಿ ಚಕ್ರೇಶ್ವರ ನಿಜಗುಣರ ಗೀತೆ. ಮುಪ್ಪಿನ ಷಡಕ್ಷರಿ ದೇವರ ಹಾಡುಗಳೆಲ್ಲ ಅವರ ಸಹಜಾನಂದ ಸ್ಥಿತಿಯಲ್ಲಿ, ಅಂತರಂಗದ ಆವಿಷ್ಕರಣದ ಉತ್ಕಟೇಚ್ಛೆಯ ವಿಕಳತೆಯಲ್ಲಿ; ಕಾಯಮನಪ್ರಾಣಗಳ ಪರಿಶುದ್ಧಿ ಪಾವಿತ್ರ್ಯದ ಪ್ರಬಲ ಆಕಾಂಕ್ಷೆಯ ತಳಮಳದಲ್ಲಿ, ಮುಗ್ಧ ಮಧುರ ಭಕ್ತಿಯ ತಾದಾತ್ಮ್ಯ ತನ್ಮಯತೆಗಳಲ್ಲಿ, ವೀರವಿರತಿಯ ನಿತ್ಯತೃಪ್ತತೆಯಲ್ಲಿ ಅವರ ದೇಹವೀಣೆಯಿಂದ ಹೊರಬಿದ್ದ ಮಧುರ ಮಂಜುಲ ಆಲಾಪಗಳು; ಇಂಚರಗಳು! ತಾದಾತ್ಮ್ಯ, ತನ್ಮಯತೆ, ಪರವಶತೆ, ವಿಕಳತೆ, ಮುಗ್ಧತ್ವ, ಸಮರಸಭಾವ, ಅನನ್ಯಶರಣತೆ, ವೈರಾಗ್ಯದ ಉಜ್ವಲತೆ, ಭಕ್ತಿಯ ಆವೇಶ, ಸಖಿ, ಸಲುಗೆ ಇವೇ ಮುಪ್ಪಿನಾರ್ಯರ ಹಾಡುಗಳ ಹೆಗ್ಗುರುತುಗಳು, ವೈಶಿಷ್ಟ್ಯ, ವೈಶೇಷ್ಯ ! ಇವರ ಜೀವನದಂತೆ ಇವರ ಶೈಲಿಯೂ ಸರಳ, ಸುಂದರ, ಸುಮನೋಹರ !

## ಕಾವ್ಯದ ಕಮನೀಯತೆ

ಮುಪ್ಪಿನಾರ್ಯರ ಹಾಡುಗಳಲ್ಲಿ ಭಾವವೆಲ್ಲ ಅನುಭಾವ, ರಸವೆಲ್ಲ ಸಮರಸ, ರುಚಿಯೆಲ್ಲ ಶುಚಿ; ಅಧ್ಯಾತ್ಮಜೀವಿಯ ಅಂತರಂಗದ ಆಕಾಂಕ್ಷೆಗಳೇ ಹಾಡಿನ ಹೊನಲಾಗಿ ಹರಿದಿರುವ

ಮೂಲಕ ಸಾಯುಜ್ಯೋನ್ಮುಖರತಿಯ ಮನೋಹರತ್ವವೂ, ಅಪರೋಕ್ಷಜ್ಞಾನದ ಬೆಳಕೂ, ಸರ್ವಾರ್ಪಣಭಾವದ ಸೌಂದರ್ಯವೂ, ವೀರವಿರತಿಯ ಗಾಂಭೀರ್ಯವೂ, ಮಧುರ ಭಕ್ತಿಯ ಮನೋಜ್ಞತೆಯೂ ಹಾಡುಗಳ ತುಂಬೆಲ್ಲ ಸಾಂದ್ರವಾಗಿ ಹರಡಿಕೊಂಡಿವೆ. ಕವಿವರ್ಯ ಬೇಂದ್ರೆಯವರು ತಮ್ಮ "ನಮಗೆ ಬೇಕಾದ ಕಾವ್ಯ" ವೆಂಬ ಲೇಖದಲ್ಲಿ ಇವರ "ಎಲೆ ಲಿಂಗವೆ !" ಎಂಬ ಹಾಡನ್ನು ಉದಾಹರಿಸಿ, "ಹೀಗೆ ಹಾಡಬಲ್ಲ ಸರ್ವ ಸಮರ್ಪಣದ ಸೇವಾಭಕ್ತಿಯ ಕವಿಗಳೆಮಗೆ ಬೇಕೆಂದು ಬರೆದಿದ್ದಾರೆ. ತಮ್ಮ ರೇಡಿಯೋ ಭಾಷಣದಲ್ಲಿ ಇವರ ಕವನಗಳನ್ನು ವೆಗ್ಗಳವಾಗಿ ಉದಾಹರಿಸಿ ಇವರ ಹಾಡುಗಳ ಬಗ್ಗೆ ಇದ್ದ ತಮ್ಮ ಆದರ ಗೌರವಗಳನ್ನು ವ್ಯಕ್ತಪಡಿಸಿದ್ದಾರೆ.

## ಭಾವದ ಬೆಡಗು

ತಮ್ಮ ಆಧ್ಯಾತ್ಮಿಕ ಪ್ರಗತಿಯನ್ನು, ಆಂತರಿಕ ಜೀವನದ ವಿಕಾಸವನ್ನು ಚಿತ್ರಿಸುವಾಗ ಮುಪ್ಪಿನಾರ್ಯರು ತಮ್ಮ ಹಾಡುಗಳಲ್ಲಿ ಅನೇಕ ಅಪೂರ್ವವಾದ, ಹಿಂದೆ ಯಾರೂ ಕಂಡರಿಯದ, ನವೀನ ಭಾವಗಳನ್ನು ಹೆಣೆದಿದ್ದಾರೆ.

ಮುನ್ನ ನಮ್ಮ ಶರಣರುಗಳು । ನಿನ್ನ ಕಾಡಿದುದಕ್ಕೆ ಈಗ ।
ಎನ್ನ ಮೇಲೆ ಹಗೆಯ ಮುಗುಚುತಿಹೆಯೋ ? ಕಾಣೆನು ॥
ಪರಮ ಮಾಗಿದೇವ ತನ್ನ । ಹೊರೆಯ ಹೊರಿಸಲಾಗಿ
ತಲೆಯು ।
ಉರಿದುದಕ್ಕೆ ಎನ್ನ ಕಾಡಿದಪಿರೊ ? ಕಾಣೆನು ॥
ಹಿಂದುಳಿಯಿತಮವಾಸ್ಯೆ । ಮುಂದೆ ಹುಣ್ಣಿಮೆ ಬಂತು ।
ಎಂದಿಗೆ ಎನ್ನವನು ಕರೆಯುಬಹರೋ ।

ಎನ್ನನೊಲ್ಲದಿದ್ದೊಡೆ ಏನು । ಶಿವ ಶಿವಾ
ಎನ್ನ ನಿನ್ನ ಕೂಡಿಸಿದ್ದೇನು ।
ಎನ್ನ ಬಿಡುವೆನೆಂದೊಡೆ ನೀನು । ಶಿವ ಶಿವಾ
ನಿನ್ನ ಬಿಡೆನು ಗುರುವಿನಾಜ್ಞೆಗೆ ॥
ಇಂತಪ್ಪವರ ಬಂಟ । ನಿಂತು ಭವದೊಳು ಬಂದ ।
ಸಂತೆಯೆಂದರೆ 'ನಿಮಗೆ ಕೊರತೆ'ಯಯ್ಯ ॥

ಮುಂತಾದ ನುಡಿಗಳಲ್ಲಿ ಅಡಗಿರುವ ಭಾವಸೌಂದರ್ಯವು ಅಪೂರ್ವವಿದೆ, ಅವರ್ಣನೀಯವಿದೆ, ಅನ್ಯಾಸದೃಶವಿದೆ !

## ವಚನಶಾಸ್ತ್ರದ ವರ್ಚಸ್ಸು

ಬಸವಣ್ಣನವರಿಂದೀಚೆಗೆ ವೀರಶೈವ ಸಾಹಿತ್ಯದ ಮೇಲೆ ವಚನಶಾಸ್ತ್ರದ ಪ್ರಭಾವವು ವೆಗ್ಗಳವಾಗಿ ಬಿದ್ದಿದೆ. ಹರಿಹರ ಪದ್ಮರಸರು ರಗಳೆಗಳನ್ನೇ ಬರೆಯಲಿ, ರಾಘವಾಂಕ ಚಾಮರಸರು ಷಟ್ಪದಿಗಳನ್ನೇ ರಚಿಸಲಿ, ಮಗ್ಗೆಯ ಮಾಯಿದೇವರು ಶತಕಗಳನ್ನೇ ಸೃಜಿಸಲಿ, ಸರ್ವಜ್ಞನು ತ್ರಿಪದಿಗಳನ್ನೇ ಉಸಿರಲಿ, ಶರಣರು ಹಾಡುಗಳನ್ನೇ ಹಾಡಲಿ, ಎಲ್ಲರೂ ವಚನಶಾಸ್ತ್ರದ ಉದಾರ ಉದಾತ್ತ ತತ್ವಗಳನ್ನೇ ಪ್ರತಿಪಾದಿಸಿ ಪಸರಿಸಿದ್ದಾರೆ. ಪ್ರಸ್ತುತ ಗ್ರಂಥದಲ್ಲಿ ಪ್ರತಿಹಾಡಿನ ಕೆಳಗೆ ಅದೇ ಭಾವವನ್ನು ಸೂಚಿಸುವ ವಚನವನ್ನು ಜೋಡಿಸಿದೆ. ಸ್ವತಃ ಮುಪ್ಪಿನಾರ್ಯರೇ "ಬುದ್ಧಿಯನ್ನು ಹೇಳುವದಕ್ಕೆ ಆದ್ಯರುಗಳ ವಚನವುಂಟು" ಎಂದು ಹಿಗ್ಗಿನಿಂದ ಹೇಳಿಕೊಂಡಿದ್ದಾರೆ. ಅವರೇ,

ಹಿಂದಣ ವಾಸನೆಯನು ಪರಿಹರಿಸುವ
ಮುಂದಣ ಸದ್ಗತಿಯನು ತೋರುವ ಘನ
ಸಂದ ಪುರಾತರ ವಚನಗಳಿರುತಿರೆ ಏತರ ಭಯವೆಮಗೆ ?

ಎಂದು ಹೆಮ್ಮೆಯಿಂದ ಧೈರ್ಯವಾಗಿ ವಚನಗಳ ಶ್ರೇಷ್ಠತ್ವವನ್ನು ಹಾಡಿ, ಹೊಗಳಿ ಹರಡಿದ್ದಾರೆ.

## ಅಣ್ಣನವರ ಆದರ್ಶ

ಸಾಹಿತ್ಯವೇ ಜೀವನವಾದ, ಶಾಶ್ವತಸೇವೆಯೇ ಜೀವನಾದರ್ಶವಾದ ಶ್ರೀ ಮಂಜಪ್ಪಣ್ಣನವರು ಇದುವರೆಗೆ ಶಿಶುಸಾಹಿತ್ಯದಿಂದ ಗಂಭೀರಸಾಹಿತ್ಯದವರೆಗೆ ವಿವಿಧ ವಿಷಯಗಳನ್ನು ಕುರಿತು ೫೦ ಕ್ಕೆ ಮೇಲ್ಪಟ್ಟು ಕಿರಿಹಿರಿ ಹೊತ್ತಿಗೆಗಳನ್ನು ಬರೆದು, ಕನ್ನಡ ಸಾರಸ್ವತ ಪ್ರಪಂಚಕ್ಕೆ ಮಹೋಪಕಾರ ಮಾಡಿದ್ದಾರೆ. ಬಸವಾದಿ ಪ್ರಮಥರ ತತ್ತ್ವ ಪ್ರಸಾರದ ಕಾರ್ಯದಲ್ಲಿ ಇವರು ಮಾಡುತ್ತಿರುವ ಸೇವೆ ಅದ್ಭುತವಾದುದು. ಹಿಂದು ಧರ್ಮರಕ್ಷಣೆಗಾಗಿ ಇವರು ಕನ್ನಡ ನಾಡಿನಲ್ಲೆಲ್ಲ ಗುಡುಗಾಡುತ್ತಿದ್ದಾರೆ. ಚಿಕ್ಕದಾದರೂ ಚೊಕ್ಕ ಚಿನ್ನದಂತಿರುವ "ಸುಬೋಧ ಸಾರ"ವನ್ನು ಸುಂದರವಾಗಿ ಅಚ್ಚು ಹಾಕಿಸಿ ಕನ್ನಡ ಜನತೆಗೆ ನೀಡಿದ್ದಾರೆ. ವಚನ ಶಾಸ್ತ್ರವು ರಾ. ಸಾ. ಹಳಕಟ್ಟಿಯವರಿಂದ ಬೆಳಕಿಗೆ ಬಂದಂತೆ ಶಿವಶರಣರ ಹಾಡುಗಬ್ಬಗಳು ಅಣ್ಣನವರಿಂದ ಬೈಲಿಗೆ ಬರಲಿ ! ಅಣ್ಣನವರು ದೀರ್ಘಾಯುಗಳಾಗಲಿ ! ಅವರಿಂದ ಇಂಥ ಕೃತಿರತ್ನಗಳು ಹೆಚ್ಚು ಹೆಚ್ಚಾಗಿ ಹೊರಬೀಳಲಿ !

ಕನ್ನಡದ ಕಂದ,

**ಕಾವ್ಯಾನಂದ**

॥ ಓಂ ॥

# ಹಿನ್ನುಡಿ

## (ಮೂರನೆಯ ಮುದ್ರಣ)

“ಯುಗವನಂತವು ಹಿಂಗುತಿರುತಿಹವು, ಅದರಲ್ಲಿ
ಜಗವನಾಳಿದ ರಾಯರುಗಳು ಹೋದರು ಕೆಲರು !
ಮಿಗೆ ದನುಜ ಮನುಜರವಧಿಗಳಿಲ್ಲದಮರಗಳ
ಸುರಸಿದ್ಧರುಗಳಳಿದರು !

.... .... .... ....

ಇವರ ಮಾತಂತಿರಲಿ, ಔದುಂಬರದ ವೃಕ್ಷ
ತವೆ ಕಾಲಕಾಲಕ್ಕೆ ಫಲದೋರಿಯಳಿವಂತೆ
ಶಿವನೊಳಗೆ ಬ್ರಹ್ಮಾಂಡ ಕೋಟಿಗಳು ಒಗೆದೊಗೆದು
ತೋರಿಯಡುಗುತಲಿರ್ಪುವು !”

ಎಂದು ಮುಪ್ಪಿನಾರ್ಯರೇ ಅಪ್ಪಣೆಕೊಡಿಸಿದ್ದಾರೆ. ಎಂದ ಮೇಲೆ ನೋಡನೋಡುತ್ತ ಹದಿನೈದು ವರ್ಷಗಳು ಕಳೆದು ಹೋದುದೇನಚ್ಚರಿ ? ‘ಎವೆ ತೆರೆದಿಕ್ಕುವಷ್ಟರಲ್ಲಿ ಗಾವುದ ಗಾವುದ ಗಾವುದ ಮುಂದೆ’ ಹಾರುವ ಹೊತ್ತಿನ ಹಕ್ಕಿಯ ವೇಗವನ್ನು ಅನುಲಕ್ಷಿಸಿದಾಗ ಬಡ ಹದಿನೈದು ವರ್ಷಗಳಿಗಾವ ಬೆಲೆಯಿದೆ ? ಆದರೂ, ಈ ಹದಿನೈದು ವರ್ಷಗಳು ‘ಕಾವ್ಯಾನಂದ’ ನಂಥ ವ್ಯಕ್ತಿಯ ಜೀವಮಾನದಲ್ಲಿ ಅದೆಷ್ಟೋ ಅನುಲ್ಲೇಖ

ನೀಯವಾಗಿ ತೋರಿದರೂ, ಭರತಖಂಡದ ಇತಿಹಾಸದಲ್ಲಿ ಮಾತ್ರ ಈ ಅಲ್ಪಾವಧಿಯೇ ಅತ್ಯಂತ ಮಹತ್ವದ ಕಾಲಖಂಡ ವೆಂಬುದರಲ್ಲಿ ಸಂದೇಹವಿಲ್ಲ. ೧೯೪೦ ರ ಆರಂಭದಲ್ಲಿ ಕಾವ್ಯಾನಂದನು ಆರು ತಿಂಗಳು ಆಲಮಟ್ಟಿಯ ಆಶ್ರಮದಲ್ಲಿ "ಅಣ್ಣನವರ" (ಇದು ಲಿಂಗೈಕ್ಯ ಮಂಜಪ್ಪನವರಿಗೆ ಜನರು ಪ್ರೀತಿಯಿಂದ ಇಟ್ಟ ಹೆಸರು) ಸಾನ್ನಿಧ್ಯದಲ್ಲಿದ್ದಾಗ, ಅಲ್ಲಿ ಅನವರತ ತೆರೆದಿರುತ್ತಿದ್ದ ಅರಿವಿನ, ಅನುಭವದ, ಆನಂದದ ಅರವಟ್ಟಿಗೆಯಿಂದ ಹರಿಯುತ್ತಿದ್ದ ಅಮೃತದಲ್ಲಿ ಪಾಲುಗೊಳ್ಳುತ್ತಲಿದ್ದಾಗ ಭಾರತದ ಭವಿತವ್ಯ ಕುಲುಮೆಯಲ್ಲಿ ಕುದಿಯುತ್ತಲಿದ್ದಿತು. ಇಂದು ನಮ್ಮ ಕಣ್ಣೆದುರಿಗೇ ಸ್ವತಂತ್ರ ಭಾರತದ ಭವ್ಯಭವಿತವ್ಯವು ಬುವಿ ಬೆಕ್ಕಸಬೆರಗಾಗುವಂತೆ ರೂಪುಗೊಳ್ಳುತ್ತಲಿದೆ. ಬೃಹದ್ಭಾರತದಲ್ಲಿ ಏಕೀಕೃತ ಕರ್ನಾಟಕವೂ ತನ್ನ ಸುಪ್ತಶಕ್ತಿಗಳ, ಗುಪ್ತಶಕ್ಯತೆಗಳ, ಪ್ರಚ್ಛನ್ನ ಸಂಭಾವ್ಯತೆಗಳ ಪುನರೋದಯದ, ಪುನರ್ವಿಕಸನದ, ಪುನರುತ್ಥಾನದ ಪ್ರತೀಕವಾಗಿ ಮೂಡಿ ಮೈದೋರುವುದರಲ್ಲಿದೆ.

ರಾಷ್ಟ್ರಜೀವನದ ವಿಶಾಲ ಕ್ಷಿತಿಜದ ಮೇಲೆ ಇಂಥ ಇನ್ನೂ ಅನೇಕ ಸಾಧನೆ ಸಿದ್ಧಿಗಳ ತೇಜಃಪುಂಜ ತಾರಕೆಗಳು ತೊಳಗುತ್ತಲಿವೆ. ಇವೆಲ್ಲ ಎಲ್ಲರಿಗೂ ಸಮಾನವಾಗಿ ಆನಂದಪ್ರದವಾಗಿರುವ ಸಂಗತಿಗಳು. ಆದರೆ ಕಾವ್ಯಾನಂದನಿಗೇ ವಿಶೇಷವಾಗಿ ಹರ್ಷದಾಯಕವೆನಿಸಿದ ಒಂದು ಮಹತ್ಕಾರ್ಯವೂ ಆಗಿದೆ ಈ ಅವಧಿಯಲ್ಲಿ. 'ಸುಬೋಧಸಾರ'ದ ಮುನ್ನುಡಿಯಲ್ಲಿ. "ವಚನಶಾಸ್ತ್ರವು ರಾ. ಸಾ. ಹಳಕಟ್ಟಿಯವರಿಂದ ಬೆಳಕಿಗೆ ಬಂದಂತೆ ಶಿವಶರಣರ ಹಾಡುಗಬ್ಬಗಳು ಅಣ್ಣನವರಿಂದ ಬಯಲಿಗೆ ಬರಲಿ; ಅಣ್ಣನವರು ದೀರ್ಘಾಯುಗಳಾಗಲಿ !"

ಎಂದು ಕಾವ್ಯಾನಂದನು ಹಾರೈಸಿದ್ದನು. ಆದರೆ ಅಣ್ಣನವರು ದೀರ್ಘಾಯುಗಳಾಗಲಿಲ್ಲ ! ಮುಂದೆ ಬಹು ಬೇಗ ಬಯಲಾದರು! ಅವರು ಆರಂಭಿಸಿದ್ದ 'ಪ್ರಗತಿ ಗ್ರಂಥ ಸಮಿತಿ' ಕಾಲಗರ್ಭದಲ್ಲಿ ಕಣ್ಮರೆಯಾಯಿತು; ಆಲಮಟ್ಟಿಯ ಆಶ್ರಮ ಬೀಳು ಬಿದ್ದಿತು; 'ಶರಣ ಸಂದೇಶ' ಮೌನಸಾಗರದಲ್ಲಿ ಮುಳುಗಿ ಹೋಯಿತು! ಶರಣರ ಹಾಡುಗಬ್ಬಗಳನ್ನು ಹೊರಗೆಡಹಲು ಯಾರು ಮುಂದೆ ಬರಬೇಕು ?

ಪ್ರಕೃತಿಯು ತರಹನ್ನರಿಯದು. ತೆರವಾದ ಸ್ಥಳಕ್ಕೆ ಎಲ್ಲಿಂದಲೋ ಏನೋ ಬಂದು ತುಂಬಿಕೊಳ್ಳಲೇಬೇಕು; ತುಂಬಿಕೊಳ್ಳುತ್ತಲೇ ಬಂದಿದೆ. ತಡವಾಗಬಹದು; ತಡೆಯಾಗಲಾರದು. ಅಣ್ಣನವರ ಅವಸಾನದಿಂದ ಅವರು ಕೈಕೊಳ್ಳಲಿದ್ದ ಈ ಕಾರ್ಯ ಅಷ್ಟಕ್ಕೇ ನಿಂತು ಹೋಗುವದೆಂಬ ಭ್ರಾಂತಿ ಬಯಲಾಗಲು ಬಹಳ ದಿನ ಬೇಕಾಗಿಲ್ಲ.

ಓದುಗರೀಗ ಆಲಮಟ್ಟಿಯಿಂದ ಧಾರವಾಡದತ್ತ ದೃಷ್ಟಿ ಹೊರಳಿಸಬೇಕು. ಅಲ್ಲೊಬ್ಬ ನೂತನ ಶಿವಶರಣರು, ಶಿವಯೋಗಿಗಳು, ಶಿವಾನುಭವಿಗಳು ಕಳೆದ ಅರ್ಧ ಶತಮಾನದಿಂದ 'ಅಧ್ಯಾತ್ಮವೇ ನಿಜಿತ ಪ್ರಯೋಜನವೆನಗೆ' ಎನ್ನುತ್ತ, ಶಿವಯೋಗೀಶ್ವರ ಪ್ರಸಾದನಿಲಯದ ಮೂಲಕ, ಶಿವಾನುಭವ ಕಾಲೇಜಿನ ಮುಖಾಂತರ, ಶಿವಾನುಭವ ಸಂಸ್ಥೆಯ ದ್ವಾರಾ, ಜ್ಞಾನದಾಸೋಹ, ಜಾತ್ರೆ, ಉತ್ಸವ, ಸಭೆ ಸಮ್ಮೇಳನ ಮುಂತಾದವುಗಳ ಮೂಲಕ ವಿದ್ಯಾರ್ಥಿಗಳಲ್ಲಿ, ವ್ಯಾಪಾರಿಗಳಲ್ಲಿ, ಸ್ತ್ರೀಯರಲ್ಲಿ ಪುರುಷರಲ್ಲಿ, ಸಣ್ಣವರಲ್ಲಿ ದೊಡ್ಡವರಲ್ಲಿ, ಬಂದವರಲ್ಲಿ ಹೋದವರಲ್ಲಿ, ನಿಂದವರಲ್ಲಿ ನೆರೆದವರಲ್ಲಿ, ವಂದಿಸಿದವರಲ್ಲಿ ನಿಂದಿಸಿದವರಲ್ಲಿ, ಒಲಿದವರಲ್ಲಿ ಒಲಿಯದವರಲ್ಲಿ—ತಮ್ಮ ದಿವ್ಯ

ದೃಷ್ಟಿಗೆ ಬಿದ್ದ ಸರ್ವರಲ್ಲಿ ಶಿವಚೈತನ್ಯವನ್ನು ಪುಟಗೊಳಿಸುತ್ತ ಬಂದಿದ್ದಾರೆ. ಅವರ ಪರುಷ ಹಸ್ತ ಮುಟ್ಟಿದುದೆಲ್ಲ ಪವಿತ್ರ ವಾಗುತ್ತ ಬಂದಿದೆ. ಅವರ ದಯಾದೃಷ್ಟಿಗೆ ಬಿದ್ದವರೆಲ್ಲ ಉದ್ಧಾರ ವಾಗುತ್ತ ಬಂದಿದ್ದಾರೆ; ಅವರ ಅಮೃತವಚನ ಕೇಳಿದವರೆಲ್ಲ ಆಚಾರಸ್ವರ್ಗದ ಅವರೋಹಣೆಗೈಯುತ್ತ ಬಂದಿದ್ದಾರೆ; ಅವರ ಬಳಿಗೆ ಸುಳಿದವರೆಲ್ಲ ಭಕ್ತರಾಗುತ್ತ, ಮುಕ್ತರಾಗುತ್ತ ಬಂದಿ ದ್ದಾರೆ. ನಿತ್ಯಸತ್ವಸ್ಥರೂ, ನಿರ್ದ್ವಂದ್ವರೂ, ನಿಜಾನಂದಲೀಲಾ ವಿಲಾಸರೂ, ನಿರುಪಾಧಿಕಜ್ಯೋತಿಸ್ವರೂಪರೂ, ನಿರಂಜನರೂ, ನಿರ್ವಿಕಲ್ಪರೂ, ನಿರುಪಮಶಾಂತಿಸುಧಾಂಶುಮಾಲಾವಿಭೂ ಷಿತರೂ ಆದ ಮಹಿಮರ ದರ್ಶನ ಮಾತ್ರದಿಂದ ಬಗೆಯ ಬೇಗುದಿಗಳೆಲ್ಲಿ ಬಯಲಾಗಿ ಶಾಂತಿ ನೆಲೆಯೊಡೆಯುವದು. ಅವರು ಶರಣಕುಲದೀಪಕರು. ಶಿವಾನುಭವ ಸಾಮ್ರಾಜ್ಯದ ಸಾಮ್ರಾಟರು. ಶಿವಯೋಗವೇ ಸಾಕಾರವಾಗಿ ಸುಳಿದಾಡು ವಂತೆ ತೋರುವ ಶುದ್ಧಾತ್ಮರು. ಮಹಾತ್ಮರು. ಮಹಾಯೋ ಗಿಗಳು.

ಅನವರತ ಕಾಯಕನಿರತರಾದ, ಸರ್ವಾರ್ಪಣ ಭಾವ ಭರಿತರಾದ, ಪಾವನಚರಿತರಾದ ಈ ಸತ್ಕ್ರಿಯಾವೀರರ ದೃಷ್ಟಿ ಶರಣರ ಹಾಡುಗಬ್ಬಗಳ ಮೇಲೆ ಬಿದ್ದಿತು; ಶರಣ ಸಾಹಿತ್ಯ ಗೆದ್ದಿತು; 'ಕೈವಲ್ಯ ದರ್ಪಣ' ದಲ್ಲಿ ಶರಣಸಾಹಿತ್ಯದ ಸ್ವರೂಪ ವನ್ನು ಕಂಡ ಸದ್ಭಕ್ತ ಸಮೂಹ ಸಮಗ್ರ ಶರಣ ಸಾಹಿತ್ಯದ ಸವಿಯನ್ನು ಸೂರೆಗೊಳ್ಳಲು ಹಾತೊರೆಯಿತು. ತತ್ಪರಿಣಾಮ ವಾಗಿ 'ಶ್ರೀ ಶಿವಯೋಗೀಶ್ವರ ಗ್ರಂಥಮಾಲೆ' ಬೃಹದಾಕಾರ ವಾಗಿ ಬೆಳೆಯಿತು. ಇಂದು ಒಂದು ವಿಶ್ವವಿದ್ಯಾನಿಲಯವು ಸಹ ಇದಕ್ಕಿಂತ ಅಧಿಕ ಅವಧಿಯಲ್ಲಿ ಪ್ರಕಟಿಸಲಾರದಷ್ಟು ಕೃತಿ ರತ್ನಗಳು ಈ ಮಾಲೆಯಲ್ಲಿ ಈ ತಪಸ್ವಿಗಳ ಪ್ರಭಾವದಿಂದ

ಪ್ರಕಟವಾಗಿವೆ! ೧೯೪೦ ರಲ್ಲಿ ಇದೇ 'ಸುಬೋಧ ಸಾರ' ದಲ್ಲಿ ವ್ಯಕ್ತವಾಗಿದ್ದ ಕಾವ್ಯಾನಂದನ ಹೃದಯದ ಹಾರೈಕೆ ಈಗ ಈ 'ಹಿನ್ನುಡಿ' ಬರೆಯುವ ಹೊತ್ತಿಗೆ ಈ ರೀತಿ ಪೂರ್ಣವಾಗಿ ಅವನನ್ನು ಆವುದೋ ಅರಿಯಲಾಗದ ಧನ್ಯತೆಯು ಆವರಿಸಿದೆ! 'ಸುಬೋಧ ಸಾರ'ದ ಸಂಪಾದನೆಯಲ್ಲಿ ಅವನೂ ಅಳಿಲ ಸೇವೆ ಸಲ್ಲಿಸಿದ್ದನು. ಇಂದು ಅದು ಇಷ್ಟು ಜನಪ್ರಿಯವಾಗಿ ಅದರ ಮೂರನೆಯ ಆವೃತ್ತಿ ಅಚ್ಚಾದುದನ್ನು ನೋಡಿ ಅವನಿಗೆಷ್ಟು ಆನಂದವಾಗಿರಲಿಕ್ಕಿಲ್ಲ ? ಅಂದು ಇದರ ಸಂಪಾದನೆಯಲ್ಲಿ ನೆರವಾಗುವುದಲ್ಲದೆ ಇತ್ತೀಚೆಗೆ 'ಹೆಮ್ಮಗಳು' ಮತ್ತು 'ಮುಪ್ಪಿನಾರ್ಯರ ಭಾವ ಪಾತ್ರಗಳು' ಎಂಬ ಎರಡು ಸಂಸ್ಕೃತಿಗಳಿಂದ ಮುಪ್ಪಿನಾರ್ಯರ ಮಹತಿಯನ್ನು ಮನಗಾಣಿಸಿಕೊಟ್ಟ ಪೂಜ್ಯ 'ಶ್ರೀ ಜ. ಚ. ನಿ.' ಅವರಿಗೆಷ್ಟು ಆನಂದವಾಗಿರಲಿಕ್ಕಿಲ್ಲ ? ಈ ಮಹಾತ್ಕಾರ್ಯವನ್ನು ಪೂರ್ತಿಗೊಳಿಸಿ ಈ ಆನಂದಕ್ಕೆ ಕಾರಣರಾದ ಧಾರವಾಡದ, ಅಲ್ಲ—ಕರ್ನಾಟಕದ, ಅಲ್ಲ—ಭಾರತದ ಮಹಾಶಿವಯೋಗಿ ಮೃತ್ಯುಂಜಯ ಮಹಾಸ್ವಾಮಿಗಳವರ ಪವಿತ್ರ ಪದಪದ್ಮಗಳಿಗೆ ಕಾವ್ಯಾನಂದನು ಅಂನಂತಾನಂತ ಪ್ರಣಾಮ ಪುಷ್ಪಗಳನ್ನು ಅರ್ಪಿಸಿ ಈ 'ಹಿನ್ನುಡಿ'ಯನ್ನು ಮುಗಿಸುವನು. ಸತ್ಯಶರಣರ ಉದಾತ್ತ ಸಾಹಿತ್ಯ ಸರ್ವತ್ರ ಪ್ರಸರಿಸಲಿ !

ಹೈದರಾಬಾದು ದಕ್ಷಿಣ
ನಾಗಪಂಚಮಿ
೧೯೫೫

**ಕಾವ್ಯಾನಂದ**

## ಶಿವಯೋಗಿ ಕವಿ

# ಮುಪ್ಪಿನ ಷಡಕ್ಷರಿದೇವ

೧೨ ನೆಯ ಶತಮಾನ; ಕಲ್ಯಾಣಪಟ್ಟಣದಲ್ಲಿ ದಂಡನಾಥ ಚೂಡಾಮಣಿ ಬಸವಣ್ಣನವರಿಂದ ಕ್ರಾಂತಿಯಾಯಿತೆಂದು ಹೇಳುವದು ಹೆಮ್ಮೆಯ ಮಾತೆನಿಸಿದೆ. ಕ್ರಾಂತಿಯೆಂದರೆ ಕೇವಲ ಧಾರ್ಮಿಕ ರಂಗದಲ್ಲಿಯಷ್ಟೇ ಅಲ್ಲ; ರಾಜಕೀಯ ರಂಗದಲ್ಲಿಯಷ್ಟೇ ಅಲ್ಲ; ಅದು ಸಾಹಿತ್ಯರಂಗವನ್ನೂ ಪ್ರವೇಶಿಸಿತು. ಈ ಕ್ರಾಂತಿಯ ಪರಿಣಾಮವೇ ವಚನ ಸಾಹಿತ್ಯದ ಉದಯ. ಈ ಸಾಹಿತ್ಯವು ನೂತನವಾಗಿಯೂ ನವೀನವಾಗಿಯೂ ಬೆಳೆದದ್ದು ಜಗತ್ತಿನ ಇತಿಹಾಸದಲ್ಲಿಯೇ ಮೊದಲು. ಈ ಸಾಹಿತ್ಯವು ಸಾಮಾನ್ಯವಾಗಿ ಬಸವಣ್ಣನವರಿಂದ ಪ್ರಾರಂಭವಾಯಿತೆಂದು ಹೇಳುವದು ವಾಡಿಕೆಯಾದರೂ ಹಿಂದಕ್ಕೆ ಒಯ್ಯುವದಕ್ಕೆ ಪಂಡಿತರು ಸಂಶೋಧನೆಯನ್ನು ನಡೆಯಿಸಿದ್ದಾರೆ. ಏನೇ ಇದ್ದರೂ ವಚನಶಾಸ್ತ್ರದ ಕಾಲಕ್ಕೆ ಜನ ಸಾಮಾನ್ಯರ ನಡೆನುಡಿ, ರೀತಿನೀತಿ, ಆಚಾರವಿಚಾರ, ಪೂಜೆ ಪುರಸ್ಕಾರಗಳು ಸುಧಾರಣೆ ಹೊಂದಿ ರಾಷ್ಟ್ರ ಪೋಷಕವಾದ ಕಾಯಕ ದಾಸೋಹಗಳೂ, ಉದ್ಭವಿಸಿದವು. ಬಸವಣ್ಣನವರು ಹಿಂದಿನ ವೈದಿಕಧರ್ಮ, ಜೈನಧರ್ಮ, ಬೌದ್ಧಧರ್ಮ, ಮೊದಲಾದ ಧರ್ಮಗಳಲ್ಲಿಯ ಒಳ್ಳೆಯ ಗುಣಗಳೆಲ್ಲವನ್ನೂ ಅವಲೋಕಿಸಿ, ಅವುಗಳನ್ನು ಅಳವಡಿಸಿಕೊಂಡು ಧರ್ಮವು ಸಾಮಾನ್ಯನಿಗೂ

ಒಂದೇ ಎಂದು ಸಾರಿ, ಉನ್ನತಮಟ್ಟದ ಸಮಾಜವನ್ನು ಕಟ್ಟಿದರು. ಆದುದರಿಂದ ಬಡವನಿಗೂ ಬಲ್ಲಿದನಿಗೂ ಧರ್ಮವು ಒಂದೇ ಆಯಿತು. ಚಾತುರ್ವರ್ಣ್ಯದ ಕಟ್ಟುನಿಟ್ಟುಗಳಿಗೆ ಬಹು ಕಾಲದಿಂದ ಬೇಸತ್ತಿದ್ದ ಜನರು ಈ ನೂತನ ಧರ್ಮವನ್ನು ಸ್ವೀಕರಿಸಿದ್ದು ಇದರಲ್ಲಿದ್ದ ಉದಾತ್ತ ಗುಣಗಳಿಗಾಗಿಯೇ. ಹೆಣ್ಣು-ಗಂಡೆಂಬ ಭೇದವಿಲ್ಲದೆ ಆಯತ, ಸ್ವಾಯತ, ಸನ್ನಿಹಿತ ದೀಕ್ಷಾಸಂಸ್ಕಾರಗಳಿಂದ ಹಾರವ ಮೊದಲು ಶ್ವಪಚಕಡೆಯಾಗಿ ಲಿಂಗವಂತರೆಲ್ಲರೂ ಸರಿ ಸಮಾನವಾಗುವದರಿಂದ ಸ್ವತಂತ್ರ ಭಾರತದ ಆದರ್ಶ ಸಾಧನೆಗೆ ಬಹುಪೋಷಕವಾದ ಅಸ್ತಿಭಾರ ಹಾಕಲು ವಚನ ಸಾಹಿತ್ಯವು ಮೊದಲಾಯಿತು.

ಶ್ರೀ ಬಸವಣ್ಣನವರು ಯಾವ ಮತವನ್ನೂ ತೆಗಳುವಂತೆ ಕಂಡುಬರುವದಿಲ್ಲ. ಯಾಕಂದರೆ ತಾವೊಂದು ಮಹಾಧರ್ಮವನ್ನು ಕಟ್ಟಲುದ್ಯುಕ್ತರಾದುದರಿಂದ ಅವರು ಹೇಯಪಟ್ಟದ್ದು ಧರ್ಮವನ್ನಲ್ಲ; ಅದರ ತಪ್ಪು ಆಚರಣೆಯನ್ನು; ಅದಕ್ಕಾಗಿಯೇ "ಏನಯ್ಯಾ ವಿಪ್ರರು ನುಡಿದಂತೆ ನಡೆಯರು ತಮಗೊಂದು ಬಟ್ಟೆ ಶಾಸ್ತ್ರಕ್ಕೊಂದು ಬಟ್ಟೆ" ಎಂದು ಮರುಗಿರಬೇಕು. ವಚನ ಸಾಹಿತ್ಯದಲ್ಲಿ ನಡೆಯೊಂದು ರೀತಿ, ನುಡಿಯೊಂದು ರೀತಿ, ಇದ್ದರೆ ಅದು ಬೆಲೆ ಪಡೆಯಲಾರದು. ಈ ಸಾಹಿತ್ಯದಲ್ಲಿ "ನುಡಿದರೆ ಮುತ್ತಿನಹಾರದಂತಿರಬೇಕು; ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು; ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು" ಎಂಬ ಮಾತುಗಳೇ ಇರುವುದರಿಂದ "ಮಾತೆಂದರೆ ಜ್ಯೋತಿರ್ಲಿಂಗವಾಯ್ತು"

ಇದೇ ಮಾರ್ಗವನ್ನು ಅನುಸರಿಸಿ ಜನಬದುಕಬೇಕೆಂದು ಹೊರಟ ಹಂಪೆಯ ಹರಿಹರದೇವ ರಾಘವಾಂಕರು ನಡೆದುದಕ್ಕೆ

ಉದಾಹರಣೆಗಳನ್ನು ನೋಡುತ್ತೇವೆ. "ಹರನೆಂಬುದೇ ಸತ್ಯ ಸತ್ಯವೆಂಬುದೇ ಹರನು" ಎಂದು ಹಂಪೆಯ ರಾಘವಾಂಕ ಪಂಡಿತನು ಹೇಳಿದ್ದಾನೆ. "ಆವ ಜಾತಿಯೊಳು ಹುಟ್ಟಿಸಿದೊಡೆ ಎಲೆ ದೇವ, ನೀವಲ್ಲದರಿಯದಂತಿರಿಸೆನ್ನನೆಲೆದೇವಾ" ಎಂದು ಹರೀಶ್ವರನು ಹಾಡಿದ್ದಾನೆ. ಅನ್ಯದೈವವ 'ಕಾಯ ವಚನ ಮನದೊಳಗೊಮ್ಮೆಯುಂ ನೆನೆಯಲಾರದ ಅದಟ ಕವಿಗಳಿವರು' "ಪಂಪಾಪುರಾಧೀಶನಿಗೆ ನಾಲಿಗೆಯಂ ಮಾರಿಕೊಂಡ" ಕವಿಗಳಿವರು. ಹೀಗೆಯೇ ವಚನಕಾರರ ಪರಂಪರೆಯನ್ನು ಮುಂದುವರಿಸಿದ್ದನ್ನು, ಮುಂದಿನ ಕವಿಗಳಾದ ಆ ಹಂಪೆಯ ಹರೀಶ್ವರ ರಾಘವಾಂಕರಲ್ಲಿ ಕಾಣುತ್ತೇವೆ. ವಚನ ಸಾಹಿತ್ಯವೇ ಮಾರ್ಪಟ್ಟು ಸನ್ನುತ ತುಂಗಭದ್ರೆಯಂತೆ ರಗಳೆಯಾಗಿ ಪ್ರವಹಿಸಿ, ಷಟ್ಪದಿಯಾಗಿ ರಸಗಂಗೆಯಂತೆ ಝೇಂಕರಿಸಿ, ಪುನೀತ ಚಂಪುವಾಗಿ, ಸಾಂಗತ್ಯವಾಗಿ ಸಾಗಿ, ತ್ರಿಪದಿಯಾಗಿ ತಿರುಗಿ ಸಾಹಿತ್ಯದಲ್ಲಿ ವಿವಿಧ ರೂಪವನ್ನು ಪಡೆಯಿತು.

ವಚನಶಾಸ್ತ್ರವನ್ನು ಪುನಃ ಪ್ರಚಾರಕ್ಕೆ ತಂದ ಶಿವಯೋಗಿ ಕವಿಗಳಲ್ಲಿ ನಿಜಗುಣರೂ, ಸರ್ಪಭೂಷಣರೂ, ಮೈಲಾರದ ಬಸವಲಿಂಗ ಶರಣರು, ಮುಳಗುಂದದ ಬಾಲಲೀಲಾಮಹಾಂತ ಶಿವಯೋಗಿಗಳೂ ನಾಗಭೂಷಣ ಘನಮಠಾರ್ಯರೂ, ಮುಪ್ಪಿನಷಡಕ್ಷರಿದೇವರೂ ಅಹುದು. ಶಿವಯೋಗಿಕವಿವರ್ಯರ ಹಾಗೂ ಕೈವಲ್ಯ ಸಾಹಿತ್ಯದ ಪರಂಪರೆಗೆ ಪ್ರಥಮಾಚಾರ್ಯ ನಿಜಗುಣ ಶಿವಯೋಗಿಗಳೇ ಮಾರ್ಗದರ್ಶಕರು.

" ಸಕಲ ಜೀವರಾಶಿಗಳಿಗೆ ಲೇಸನೇ ಬಯಸುವದು " ವೀರಶೈವ ಧರ್ಮದ, ಹೆಗ್ಗುರಿಯಾದ್ದರಿಂದ ಮುಪ್ಪಿನ ಷಡಕ್ಷರಿ ದೇವರು ಉನ್ನತ ವಿಚಾರದ ಮಹಾಶಿವಯೋಗಿಗಳಾದ್ದರಿಂದ

ಈ ಶಿವಯೋಗಿಗಳು ಸರ್ವರಲ್ಲಿಯೂ ಪರಮಾತ್ಮನ ಸ್ವರೂಪ ವನ್ನು ಕಂಡುಕೊಳ್ಳುವದರಿಂದ ಜಗತ್ತೆಲ್ಲವನ್ನೂ ಲಿಂಗಮಯ ವಾಗಿಯೇ ಕಾಣುತ್ತಾರೆ. ಪ್ರತಿಯೊಬ್ಬನೂ ತನ್ನ ಧರ್ಮ ತನ್ನ ದೇವರು ಮೊದಲಾದವುಗಳನ್ನು ಎಷ್ಟೇ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರೂ ಮುಪ್ಪಿನ ಷಡಕ್ಷರಿ ಶಿವಯೋಗಿಗಳಲ್ಲಿ ಸಮನ್ವಯ ಭಾವನೆಯನ್ನು ಕಾಣುತ್ತೇವೆ. ಸಮನ್ವಯ ದೃಷ್ಟಿಯೇ ವೀರಶೈವರ ಲಕ್ಷಣ. ಅವರ ಈ ಕೆಳಗಿನ ಪದ್ಯದಲ್ಲಿ

"ಅವರವರ ದರುಶನಕೆ
ಅವರವರ ವೇಷದಲಿ
ಅವರವರ ಭಾವಕ್ಕೆ
ಅವರವರ ಭಕ್ತಿಗೆ
ಅವರವರಿಗೆಲ್ಲ ದೇವ ನೀನೊಬ್ಬನೇ

ಹೋರಾಟವಿಕ್ಕಿಸಲು
ಬೇರಾದೆಯಲ್ಲದೆ
ಬೇರುಂಟೇ ಜಗದೊಳಗೆ ಎಲೆ ದೇವನೆ"

ನಾವು ಉನ್ನತ ಸಂಸ್ಕೃತಿಯ ವಿಶಾಲಹೃದಯದ ಮನೋ ಭಾವನೆಯನ್ನು ಕಂಡುಕೊಳ್ಳುವದು ಸ್ವಾಭಾವಿಕವಾಗಿದೆ. ಇದನ್ನೇ ರಾಷ್ಟ್ರಪಿತಪೂಜ್ಯ ಮಹಾತ್ಮಾ ಗಾಂಧೀಜಿಯವರು ೨೦ ನೆಯ ಶತಮಾನದ ಜನಾಂಗಕ್ಕೆ "ಸರ್ವವೂ ನೀನೆ, ನೀನೇ ರಾಘವಾ, ನೀನೇ ಶಂಕರ, ನೀನೇ ಅಲ್ಲಾ, ನೀನೇ ಭಗವಾನ್" ಎಂದು ಬೋಧಿಸಿದ್ದು ಇಂದು ರಾಷ್ಟ್ರದ ಗೀತೆ ಯಾಯಿತು. ಮುಪ್ಪಿನ ಷಡಕ್ಷರಶಿವಯೋಗಿಗಳು ಇಂಥ ದಿವ್ಯ ಸಂದೇಶವನ್ನು ೪೦೦ ವರ್ಷಗಳ ಹಿಂದೆಯೇ ಬೀರಿದ್ದು

ಘನತೆಯಲ್ಲವೇ ? ಪರಮಾತ್ಮನ ರೂಪು ಕನ್ನಡಿಯ ತೆರನಾಗಿದೆ. ಅವರವರ ಭಾವಕ್ಕೆ ಅವರವರ ರೂಪಕ್ಕೆ ಸರಿಯಾಗಿ ಕಾಣುವದು. "ಹರಿಯ ಭಕ್ತರು ಹರಿಯೆಂದು ಕರೆಯುವರು. ಹರನ ಭಕ್ತರು ಹರನೆಂದು ಕರೆಯುವರು, ಹೆಸರಿನಲ್ಲಿ ಭಿನ್ನತೆಯಲ್ಲದೆ ನೀನು ಮಾತ್ರ ಒಂದೇ. (ಪರಮಾತ್ಮನೊಬ್ಬನೇ). ಈ ಪರಮಾತ್ಮನು ಜನರು ಹೋರಾಟವಿಕ್ಕಿಸಲು ಬೇರಾಗಿ ಕಾಣುವನು" ಎಂತಹ ಉದಾತ್ತ ಮಾತಿದು? ಮಾನವನ ಸ್ವಭಾವವನ್ನು ವ್ಯಕ್ತಪಡಿಸುವ ಮಾನವೀಯತೆಯು ಇದರಲ್ಲಿ ಹುದುಗಿದೆ. ಕುಲಜಾತಿ ಮತಪಂಥಗಳೆಲ್ಲವೂ ಒಂದೇಯಾದ್ದರಿಂದ ವೀರಶೈವವು ವಿಶ್ವಧರ್ಮದಲ್ಲಿ ಸ್ಥಾನಪಡೆಯಲರ್ಹವಾಗಿದೆ. ಮುಪ್ಪಿನ ಷಡಕ್ಷರ ಶಿವಯೋಗಿಗಳೂ ವಚನಶಾಸ್ತ್ರವನ್ನೇ ಪುನಃ ಪ್ರಾರಂಭಿಸಿದರೆಂದು ಬೇರೆ ಹೇಳಬೇಕಾಗಿಲ್ಲ. ಈ ಪೊತ್ತಗೆಯ ಸಂಗ್ರಾಹಕರು ವಚನಗಳನ್ನು ಪ್ರತಿ ಪದ್ಯಗಳ ಕೆಳಗೆ ಕೊಟ್ಟಿರುವ ಉದ್ದೇಶವೂ ಅದನ್ನೇ ಸೂಚಿಸುತ್ತದೆ.

ಈ ಶಿವಯೋಗಿ ಕವಿಗಳು ತಮ್ಮ ಗುರುವನ್ನು ಉನ್ನತ ಸ್ಥಾನದಲ್ಲಿಟ್ಟಿರುವದನ್ನು ನೋಡಿದರೆ ಇವರ ಘನತೆಯು ವ್ಯಕ್ತವಾಗದಿರಲಾರದು. "ಸಕಲಕೆಲ್ಲಕೆ ನೀನೆ ಅಕಳಂಕ ಗುರುವೆಂದು ನಿಖಿಳ ಶಾಸ್ತ್ರವು ಪೇಳುತಿರಲರಿದೆನು" ಎಂಬುದನ್ನು ಇಂದಿನ ವಿದ್ಯಾರ್ಥಿಗಳು ಗುರುಗಳಿಗೆ ಸಲ್ಲಿಸುವ ಗೌರವ ಮರ್ಯಾದೆಯೊಡನೆ ಹೋಲಿಸಬಹುದು. ಅವರ (ಮುಪ್ಪಿನ ಷಡಕ್ಷರಿದೇವರ) ಪದ್ಯಗಳಲ್ಲಿ "ಏಕಂ ಸತ್ ವಿಪ್ರಾಃ ಬಹುಧಾ ವದಂತಿ" ಎಂಬುದೇ ಅಡಗಿದೆ.

ಮುಪ್ಪಿನ ಷಡಕ್ಷರಿ ಶಿವಯೋಗಿಗಳು ಆದ್ಯರಿಗೆ ಕೊಟ್ಟ ಗೌರವವಂತೂ ಮೇಲ್ತರಗತಿಯದಾಗಿದೆ. ಹಗಲೂ ಇರುಳೂ

ಶಿವಶರಣರ ಬರವಿಗಾಗಿ ಅಣಿಯಾಗಿ ಅತಿ ಆತುರತೆಯಿಂದ ದಾರೀ ಕಾಯುತ್ತಾರೆ. ಅವರು ಭಕ್ತಿಯ ಆವೇಶ ದಿಂದ ತುಂಬಿ, ಪರಮಾತ್ಮನನ್ನು ಬಾಯಿತುಂಬ ಹೊಗಳಿ, ಡಂಭಾಚಾರವನ್ನು ಎಸೆದು, ತಮ್ಮ ಸಕಲ ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಿಸಿದ ಮಹಾಮಹಿಮರು "ಕೊಡುವಾತಂ ಸಂಗ, ಕೊಂಬಾತಂ ಸಂಗ" ಎಂಬ ತತ್ವವೇ ಮುಪ್ಪಿನಷಡಕ್ಷರಿ ಶಿವಯೋಗಿಗಳವರದು.

ಮುಪ್ಪಿನ ಷಡಕ್ಷರ ಶಿವಯೋಗಿಗಳಿಗೆ ಮಮ್ಮಟನು ಹೇಳಿರುವ "ಕಾವ್ಯಂ ಯಶಸೇ, ಅರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೋ ಸದ್ಯಃ ಪರನಿರ್ವೃತಯೇ ಕಾಂತಾಸಂ ಮಿತತಯೋಪದೇಶಯುಜೇ" ಎಂಬ ಕಾವ್ಯದ ಉದ್ದೇಶಗಳಾ ಗಲೀ "ಖ್ಯಾತಿ ಪೂಜಾ ಲಾಭ" ದಿಚ್ಛೆಯಾಗಲಿ ಇಲ್ಲವೆ ನೆಗಳ್ತೆ ಯಾಗಲೀ ಬೇಕಾಗಿಲ್ಲ. ಪರಶಿವನ ಪ್ರೇರಣೆಯಿಂದ ಶಿವಯೋಗಿ ಗಳ ಭಾವವು ತುಂಬಿದಾಗ ಆತ್ಮದ ಆನಂದಕ್ಕಾಗಿ ಪರಮಾತ್ಮನನ್ನು ಬಾಯಿತುಂಬಿ ಹೊಗಳಿದ್ದಾರೆ. ಇವರು ಹಾಡಿ ರುವ 'ಎನಗೆ ಭೋಗ ಭಾಗ್ಯ ಬೇಡ। ಎನಗೆ ಜಪವು ತಪವು ಬೇಡ। ಎನಗೆ ನಿಮ್ಮ ತೊತ್ತು ಸೇವೆ ನಿತ್ಯವಾಗಲ್ಕೆ, 'ಕಾಡಲೇಕೆ ನರರುಗಳನು। ಬೇಡಿ ಬಳಲಲೇಕೆ ಮನವೆ' ಎಂದು ಇರುವ ಪದ್ಯಗಳನ್ನು ತ್ರಿವಿಧ ದಾಸೋಹಮೂರ್ತಿಗಳೂ, ಶರಣ ಸಂಸ್ಕೃತಿಯ ಅಮೃತ ಕಿರಣರೂ, ಮಾನವಸಸಿಯ ಬೆಳವಣಿ ಗೆಗೆ ಕಾರಣಪುರುಷರೂ ಈ ಗ್ರಂಥ ಪ್ರಕಾಶಕರೂ ಆದ ಪರಮ ಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳವರು ಮನದುಂಬಿ ಹಾಡುವದನ್ನು ಒಮ್ಮೆ ಕೇಳಿದರೆ ಸಾಕು ! ಈ ಭಾವಗೀತೆ ರಚಿ ಸಿದ ಶಿವಯೋಗಿಕವಿಯ ಸಾಕ್ಷಾತ್ಕಾರವೇ ಆದಂತೆ ಆಗುತ್ತದೆ.

ಪರಮಾತ್ಮನ ಪೂಜೆಯು ಎಲ್ಲರಿಗೂ ಸುಲಭ ಸಾಧ್ಯವೆಂದು ಇವರ ವಾಣಿಯಿಂದ ನಿರ್ವಿವಾದವಾಗಿ ತಿಳಿದು ಬರುತ್ತದೆ.

"ಧ್ವನಿಯೇ ಕಾವ್ಯದ ಜೀವಾಳ"ವೆಂದು ಸಾರಿದ ಆನಂದ ವರ್ಧನಾಚಾರ್ಯರಂತೆ, ಮುಪ್ಪಿನ ಷಡಕ್ಷರಿಶಿವಯೋಗಿಗಳ ಭಾವಗೀತೆಗಳಲ್ಲಿ ಈ ಧ್ವನಿಯು ತುಂಬಿತುಳುಕುತ್ತದೆ. ಎಲ್ಲರೂ ತಿರುಕನ ಕನಸಿನ ಪದ್ಯವನ್ನು ಹಾಡುವವರೇ; ಆದರೆ ಅದರ ಹಿಂದೆ ಅಡಗಿರುವ ಭವ್ಯಕಲ್ಪನೆಯನ್ನು ಅರಿತುಕೊಂಡಾಗ ಅಂದರೆ "ಸಂಸಾರವೆಂಬುದು ತಿರುಕನ ಕನಸಿದ್ದಂತೆ"ಎಂಬುದು ವ್ಯಕ್ತವಾದಾಗ ಕಾವ್ಯದ ಸೌಂದರ್ಯ (ಈ ಧ್ವನಿ ಶಕ್ತಿಯ ಪರಿಣಾಮವಾಗಿ) ಇನ್ನೂ ಹೆಚ್ಚುತ್ತದೆ. ಸರಳವಾದ ಶೈಲಿಯಲ್ಲಿ ಧ್ವನಿಪೂರಿತವಾಗಿ ಬರೆಯುವದು ಈ ಕವಿವರ್ಯರ ರೀತಿ ಯಾಗಿದೆ. ವೈರಾಗ್ಯವನ್ನು ಬೋಧಿಸಿದ ಕವಿವರ್ಯರಿವರು. ಇವರನ್ನೇ ರಸಋಷಿಗಳೆಂದು (**Poet saint**) ಕರೆಯುವದು.

ಕವಿಯ ಘನತೆಯು ವ್ಯಕ್ತವಾಗುವದು ಆತನ ವಾಸ್ತವೀಯತೆಯಿಂದ. ಆತನು ಬಳಸುವ ಉಪಮೆಗಳಲ್ಲಿಯೂ ಎಷ್ಟು ಅರ್ಥವಿದೆ ಎಂಬುದನ್ನು ನೋಡಬೇಕು."ಸಿರಿಯು ಕನಸಿನಂತೆ" ಕನಸಿನಲ್ಲಿ ಬೇಕಾದದ್ದನ್ನು ಕಾಣಬಹುದು ಪಡೆಯಬಹುದು. "ಎನ್ನ ಕಾಲುಗಳೆರಡು ಕಂಭವಯ್ಯಾ" ಎನ್ನ ಒಡಲೇ ನಿಮಗ ದೇವಾಲಯ" ಮುಂ. ಹೀಗೆಯೇ ಇನ್ನೂ ಅನೇಕ ಉದಾಹರಣೆಗಳನ್ನು ನೋಡಬಹುದು. ದೇವರೆಂದು ಬೇರೆಯ ಗುಡಿಗುಂಡಾರಗಳಿಗೆ ಹೋಗಬೇಕಾಗಿಲ್ಲ. ಇಂಥ ಮಹಾಮುನಿಗಳ ಒಡಲಲ್ಲಿಯೇ ಪರಮಾತ್ಮನು ವಾಸಿಸುವದರಿಂದ ಅವರ ತನುವೇ ದೇವಾಲಯ ಎಂಬ ಮಾತುಗಳೂ ಇವರ ಭಾವಗೀತೆಗಳಿಂದ ಸ್ಪಷ್ಟವಾಗುತ್ತವೆ.

ಕನ್ನಡ ಸಾಹಿತ್ಯದಲ್ಲಿ ತತ್ವಜ್ಞಾನವನ್ನು ಪ್ರತಿಪಾದಿಸುವ ಗ್ರಂಥಗಳು ಹೇರಳವಾಗಿದ್ದರೂ, ಸುಲಭವಾಗಿ ಹೇಳುವ ಗ್ರಂಥಗಳೆಂದರೆ ಚಾಮರಸ ಕವಿ ವಿರಚಿತ "ಪ್ರಭುಲಿಂಗಲೀಲೆ" ಮತ್ತು ಮಹಲಿಂಗರಂಗನ "ಅನುಭವಾಮೃತ" ಇವುಗಳಂತೆಯೆ ಮುಪ್ಪಿನ ಷಡಕ್ಷರಿ ಶಿವಯೋಗಿಗಳ ಪದ್ಯದ ಧಾಟಿಯು. ಕುಟ್ಟುವ, ಬೀಸುವ ಹೆಣ್ಣುಮಕ್ಕಳಿಗೂ, ಚಿಕ್ಕ ಬಾಲಕರಿಗೂ, ಪಂಡಿತರಿಗೂ ಅವರವರ ಭಾವಕ್ಕೆ ಅವರವರ ರೂಪಕ್ಕೆ ಸರಿಯಾಗಿ ಇವರ ಪದ್ಯಗಳು ಅರ್ಥವಾಗುತ್ತಿವೆ. ರತ್ನಾಕರ ವರ್ಣಿಯು ಸಾಂಗತ್ಯದಲ್ಲಿ ಕಾವ್ಯಬರೆದು ಹೊನ್ನಮ್ಮನಂಥ ಇನ್ನೊಬ್ಬ ಕವಿರತ್ನವನ್ನು ಹಡೆದು ಕೊಟ್ಟ. ನಮ್ಮ ಹೆಣ್ಣುಮಕ್ಕಳೂ ಹಾಡಿದರೆ ನಮ್ಮ ಸಾಹಿತ್ಯದ ಘನತೆ. ಅವರಿಗೆಯೂ ತಿಳಿಯುವಂತೆ ಭಾವಗೀತೆಗಳನ್ನು ಹಾಡಿದ್ದು ನಿಜವಾಗಿಯೂ ಕವಿಯ ವ್ಯಕ್ತಿತ್ವವನ್ನು ಸೂಚಿಸುತ್ತದೆ. "ಕಿರಿದುರೊಳೆ ಪಿರಿದುಮರ್ಥಮನರಿಪುವುದು" ಇವರ ಶೈಲಿಯ ಲಕ್ಷಣ. "ಕುರಿತಂತೆ ಪೆರರಬಗೆಯುಂ ತೆರೆದಿರೆ ಪೆರರ್ಗರಿಪಲಾರ್ಪವಂ ಮಾತರಿವಂ" ಇಂಥವರೇ ಬಲ್ಲವರು."

ಇವರ ಭಾಷೆಯು ಬೆಡಗಿನ ನುಡಿಗಡಣಗಳಿಂದ ಎಡೆಗೊಂಡು ಪ್ರವಹಿಸಿದೆ. "ಯಾವದೇ ಭಾಷೆಯು ಸಾಹಿತ್ಯದ ಹೆಮ್ಮೆಯನ್ನು ಹೇಳುವದೆಂಗರೆ ಅದು ನುಡಿಯ ಬೆಡಗನೊಡಗೊಂಡಿರಬೇಕು. ಭಾವಕ್ಕೆ ತಕ್ಕ ಭಾಷೆ ಇರಬೇಕು ಮತ್ತು ಪರಮಾನಂದವನ್ನು ಕೊಡುತ್ತಿರಬೇಕು. ಅದುವೇ ಘನವಾದ ಸಾಹಿತ್ಯ. ಪರರ ಬೋಧೆಗಿಂತ ತನ್ನ ತಾನರಿಯುವದು ಇವರ ಭಾವಗೀತೆಗಳಲ್ಲಿ ಕಂಡು ಬರುವದು. ಇವರ ಭಾವಗೀತೆಗಳು ಈ ಎಲ್ಲವನ್ನೂ ಒಳಗೊಂಡಿರುವದು ಘನತೆಯಲ್ಲವೇ ?

‘ತನುದಂಡನೆಯು ಮಾಡಿ ಜಿನುಗಲೇತಕೆ’ ?
‘ನರ ಲೋಕವೆನಗೆ ಸುರಲೋಕವೆನಗೆ’

‘ತನುವಿನ ಚಿಂತೆಯುಳಿದಾಲಿಂಗಭ್ರಾಂತಿಯೊಳಿರು ನಿನಗೆ ಸುಖ ತಪ್ಪದು’

‘ಹೇಸಿ ಮಾನವ ನಾನು ಭಾಷೆವಂತನಲ್ಲ’ ಎಂಬುವ ಈ ಎಲ್ಲ ಮಾತುಗಳು ಪಡೆನುಡಿಗಳಾಗಿ ಬೆಡಗಿನಿಂದ ಒಪ್ಪ ಗೊಂಡಿವೆ. ಒಟ್ಟಿನಲ್ಲಿ ಈ ಕವಿವರ್ಯರು ಕೈವಲ್ಯ ಸಾಹಿತ್ಯ ಪರಂಪರೆಯಲ್ಲಿ ರಾರಾಜಿಸುವ ತಾರೆಯಾಗಿ ಮೆರೆದಿದ್ದಾರೆ.

ಈ ಎನ್ನ ಪ್ರಥಮ ಪ್ರಯತ್ನಕ್ಕೆ ಅಲ್ಪಮತಿಯಾದರೂ ನಾಲ್ಕು ಮಾತುಗಳನ್ನು ಬರೆಯಲು ಎಡೆಮಾಡಿಕೊಟ್ಟ, ಈ ಗ್ರಂಥದ ಪ್ರಕಾಶಕರಾದ ಪರಮಪೂಜ್ಯ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಮೃತ್ಯುಂಜಯ ಮಹಾಸ್ವಾಮಿಗಳಿಗೂ, ಮಾತೃಹೃದಯದ ಪೂಜ್ಯನಿ. ಮಹಾಂತಪ್ಪಗಳಿಗೂ ಚಿರಋಣಿ ಯಾಗಿದ್ದೇನೆ. ಎನ್ನ ಈ ಕಾರ್ಯದಲ್ಲಿ ಹೆಚ್ಚಿಗೆ ಪ್ರೇರಿಸಿ, ಪ್ರೋತ್ಸಾಹಿಸಿದ ಪರಮಬಂಧುಗಳಾದ ಶ್ರೀಮಾನ್ ವೀರಭದ್ರಪ್ಪ ಮಾವನವರು ಮಲ್ಲಾಬಾದಿ ಇವರಿಗೂ ತುಂಬಾ ಉಪಕೃತ ನಾಗಿದ್ದೇನೆ.

ಧಾರವಾಡ
ತಾ. ೩೧-೭-೫೫

**ಬಸವರಾಜ ಚನ್ನವೀರಪ್ಪ ಜವಳಿ,**
ಬಿ. ಎ. (ಆನರ್ಸ)

# ನನ್ನದೊಂದು ಅರಿಕೆ

ಸಮಾಜ ಸುಧಾರಣೆಯ ಸಲುವಾಗಿ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಮೃತ್ಯುಂಜಯ ಸ್ವಾಮಿಗಳು ಬಹುಮುಖ ವಾಗಿ ಮಾಡಿದ ಕೆಲಸವು ಎಲ್ಲರಿಗೂ ಗೊತ್ತೇ ಅದೆ. ಅದರಲ್ಲಿ ವಚನಶಾಸ್ತ್ರ ಮತ್ತು ಶರಣ ಸಾಹಿತ್ಯಗಳನ್ನು ಪ್ರಕಟಮಾಡು ತ್ತಿರುವ ಕೆಲಸವು ಬಹು ಮಿಗಿಲಾದದ್ದು. ಅವರು ಆರಂಭ ಮಾಡಿದ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ಈಗ ಪ್ರಕಟವಾಗುತ್ತಲಿರುವ ಗ್ರಂಥವು ಹತ್ತನೆಯದು. ಇದರ ಒಂದನೆಯ ಮುದ್ರಣದ ಪ್ರತಿಗಳು ತೀರಿಹೋಗಿ ಬಹುದಿನಗಳಾದುದರಿಂದ ಇದರ ಎರಡನೆಯ ಮುದ್ರಣ ಮಾಡಿಸಬೇಕೆಂದು ಶ್ರೀ ಸ್ವಾಮಿಗಳು ನಿರ್ಧರಿಸಿ ಅದರ ಅಚ್ಚಿನ ಕರಡುಗಳನ್ನು ನೋಡಲಿಕ್ಕೆ ನನಗೆ ಅಪ್ಪಣೆ ಮಾಡಿದರು. ಆಪ್ರಕಾರ ಅದರ ಮೊದಲನೆಯ ಪುಟಗಳ ಕರಡುಗಳನ್ನು ಅಚ್ಚುಕೂಟದವರು ನನ್ನ ಕಡೆಗೆ ತಂದಾಗ ಅವುಗಳನ್ನು ನೋಡಲಾಗಿ ಅವುಗಳಲ್ಲಿ ಶಬ್ದ ವಿಭಜನೆಯ ತಪ್ಪುಗಳಲ್ಲದೆ ವ್ಯಾಕರಣ ಛಂದಸ್ಸು ಮೊದಲಾದವುಗಳ ಕೆಲವು ತಪ್ಪುಗಳು ನನಗೆ ತೋರಿದವು. ನಾನೇನು ಈ ವಿಷಯಗಳ ಅಭ್ಯಾಸ ಮಾಡಿದವನಲ್ಲ. ಈ ತಪ್ಪುಗಳನ್ನು ನಾನು ತಿದ್ದಿದರೆ ಸರಿಯಾಗುವದೆಂದು ಪೂರ್ಣ ನಂಬಿಗೆಯೂ ನನಗಿಲ್ಲ. ತಿದ್ದ ಬೇಕೋ ಅಥವಾ ಇದ್ದಕ್ಕಿದ್ದಂತೆ ಇಡಬೇಕೋ ಎಂಬ ತೊಡಕು

ಉಂಟಾಯಿತು. ಈ ಮುದ್ರಣವು ನಿಯಮಿತ ಕಾಲದಲ್ಲಿಯೇ ಮುಗಿಯಬೇಕಾದುದರಿಂದ ಈ ಗ್ರಂಥದ ಬೇರೆ ಹಳೇ ಕೈಬರಹದ ಪ್ರತಿಗಳನ್ನು ಹುಡುಕಿ ಅವುಗಳ ಸಹಾಯದಿಂದ ತಿದುವಷ್ಟು ಅವಕಾಶ ಇರಲಿಲ್ಲ. ಏನೇ ಆಗಲಿ ನನಗೆ ತಿಳಿದ ಮಟ್ಟಿಗೆ ತಿದ್ದಬೇಕೆಂದು ನಿಶ್ಚಯಿಸಿ ತಿದ್ದಿರುವೆನು. ಸುಹೃದಯರಾದ ವಾಚಕರು ಈ ಬಗ್ಗೆ ಸೂಚನೆಗಳನ್ನು ಮಾಡಿದಲ್ಲಿ ಮುಂದಿನ ಮುದ್ರಣದಲ್ಲಿ ಅವುಗಳ ಉಪಯೋಗ ಮಾಡಲಿಕ್ಕೆ ಅನುಕೂಲವಾಗುವದು.

ಈ ಗ್ರಂಥವನ್ನು ಈ ಮೊದಲು ನಾನು ನೋಡಿರಲಿಲ್ಲ. ಇದರ ಉತ್ಕೃಷ್ಟತೆಯ ಬಗ್ಗೆ ಶ್ರೀ ಕಾವ್ಯಾನಂದ ಅವರು ತಮ್ಮ ಮುನ್ನುಡಿಯಲ್ಲಿ ಸಾಕಷ್ಟು ವಿವರಿಸಿದ್ದಾರೆ. ಇದರ ಕರಡುಗಳನ್ನು ನೋಡುವದರಿಂದ ನನಗೆ ಇದರ ಅಭ್ಯಾಸವೇ ಆದಂತಾಯಿತು. ಈ ಸುಸಂಧಿಯನ್ನು ಒದಗಿಸಿ ಕೊಟ್ಟದ್ದಕ್ಕಾಗಿ ಶ್ರೀ ಸ್ವಾಮಿಗಳವರ ಅಡಿದಾವರೆಗಳನ್ನು ನಾನು ಭಕ್ತಿಪೂರ್ವಕವಾಗಿ ನೆನೆಯುತ್ತೇನೆ.

ಗೋಗ್ರಾಮ (ಗೋಕಾಕ)
ಸೋಮವಾರ ಶ್ರಾ. ವ. ೧೦, ಶಕ ೧೮೭೩ ವೀರಭದ್ರಪ್ಪ ಹಾಲಭಾವಿ
ತಾ. ೨೭-೮-೧೯೫೧

॥ ಓಂ ॥

ಶ್ರೀ ಮುಪ್ಪಿನ ಷಡಕ್ಷರಿಗಳ

# ಸುಬೋಧ ಸಾರ

❋

## ನೀನೆ ಆಕಳಂಕ ಗುರು

ರಾಗ : ಸಾರಂಗ — ತಾಳ : ಝಂಪೆ

ಸಕಲಲಕೆಲ್ಲಕೆ ನೀನೆ
ಆಕಳಂಕ ಗುರುವೆಂದು
ನಿಖಿಳ ಶಾಸ್ತ್ರವು ಪೇಳುತಿರಲರಿದೆನು ॥ಪ॥

ಎರಗಂಬಳಿಯ ಸಿದ್ಧ
ವರಲಿಂಗ ನಾಮದಿಂ
ಹರನೆ! ನೀನೆನಗೆ ದೀಕ್ಷೆಯ ಮಾಡಿದೆ
ವರ ಷಡಕ್ಷರಿಯ ದೇ
ವರ ನಾಮದಿಂದೆನಗೆ
ಅರುಹಿದಿರಿ ಶಿವಶಾಸ್ತ್ರದನುಭವವನು ೧

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ
ಅವರವರ ಭಾವಕ್ಕೆ
ಅವರವರ ಪೂಜೆಗಂ
ಅವರವರಿಗೆಲ್ಲ ಶಿವ ನೀನೊಬ್ಬನೆ ೨

ಹೋರಾಟವಿಕ್ಕಿಸಲು
ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆ ದೇವನೆ
ಆರು ಅರಿಯರು ನೀನು
ಬೇರಾದ ಪರಿಗಳನು
ಮಾರಾರಿ ಶಿವ ಷಡಕ್ಷರಿ ಲಿಂಗವೆ ೩

ಇಬ್ಬರು ಮೂವರು ದೇವರೆಂದು ಉಬ್ಬುಬ್ಬಿ ಮಾತನಾಡಬೇಡ. ದೇವನೊಬ್ಬನೇ ಕಾಣಿರೋ. ಇಬ್ಬರೆಂದು ಹುಸಿ ನೋಡಾ. ಕೂಡಲಸಂಗಮದೇವನಲ್ಲದಿಲ್ಲೆಂದಿತ್ತು ವೇದ.

—ಬಸವಣ್ಣನವರು

* * *

# ಎನ್ನ ಕರೆಯ ಬನ್ನಿ

ರಾಗ : ಸಾಳಂಗ — ತಾಳ : ಝಂಪೆ

ಹೆಮ್ಮಗಳು ನಾ ನಿಮ್ಮ
ನೆಮ್ಮಿಕೊಂಡಿರುವೆನ್ನೆ
ಗಮ್ಮನೇ ಎನ್ನವನು ಕರೆಯ ಬನ್ನಿ ||ಪ||

ಸುವ್ವಿ ಚೆನ್ನಣ್ಣನಿಗೆ
ಸುವ್ವಿ ಮಡಿವಾಳನಿಗ
ಸುವ್ವಿ ನಮ್ಮಪ್ಪ ಬಸವಯ್ಯನಡಿಗೆ
ಸುವ್ವಿ ಅಜಗಣ್ಣನಿಗೆ
ಸುವ್ವಿ ಸತ್ಯಣ್ಣನಿಗೆ
ಸುವ್ವಿ ನಮ್ಮಯ್ಯ ಪ್ರಭುರಾಯನಡಿಗೆ ೧

ಸುವ್ವಿ ಹರಳಯ್ಯನಿಗೆ
ಸುವ್ವಿ ಧೂಳಯ್ಯನಿಗೆ
ಸುವ್ವಿ ನಮ್ಮಯ್ಯ ಶ್ವಪಚಯ್ಯನಡಿಗೆ
ಸುವ್ವಿ ಭೀಮಯ್ಯನಿಗೆ
ಸುವ್ವಿ ಕಕ್ಕಯ್ಯನಿಗೆ
ಸುವ್ವಿ ನಮ್ಮಯ್ಯ ಚೆನ್ನಯ್ಯನಡಿಗೆ ೨

ನಮ್ಮವರ ಪಾಡುವೆನು
ನಮ್ಮವರ ಪೊಗಳುವೆನು
ನಮ್ಮವರನಾವಗಂ ಹರಸುತಿಹೆನು
ನಮ್ಮವರು ಬರುವುದನು
ಉಮ್ಮಳಿಸಿ ನೋಡುವೆನು
ಹಮ್ಮಿಸುವೆ ಮನದೊಳಗೆ ಬಾರದಿರಲು ೩

ಕುಟ್ಟುತ್ತ ಬೀಸುತ್ತ
ನೆಟ್ಟಿನೇ ನಮ್ಮ ಒಡತ
ಹುಟ್ಟಿದ ಪುರಾತನರ ಹಾಡುತಿಹೆನು
ಕಷ್ಟಘನ ಮರ್ತ್ಯದ
ಬಟ್ಟೆಯನು ಒಲ್ಲೆ ಕೃಪೆ
ಹುಟ್ಟದೇ ! ನಮ್ಮವರು ಕರೆಯಿರಯ್ಯ ೪

ನೀರ ಹೊಳೆಯಲಿ ನಿಂದು
ವಾರಿಯನು ನೋಡುವೆನು
ಬಾರದಿರೆ ಮನದೊಳಗೆ ಕರಗಿ ಕೊರಗಿ
ಆರೈದು ಮತ್ತೊಮ್ಮೆ
ದೂರ ದೃಷ್ಟಿಯನಿತ್ತು
ಸಾರಿ ನೋಡುವೆ ನಿಲುಕಿ ಅಳಲಿ ಬಳಲಿ ೫

ಬಂದವರ ಬರುವವರ
ನಿಂದವರ ನೆರೆದವರ
ಕುಂದದಲೆ ಕೇಳುವೆನು ನಮ್ಮವರನು
ಹಿಂದಾದ ದುಃಖದಲಿ
ನೊಂದೆನ್ನೈ ನಮ್ಮವರು
ಎಂದಿಗೇ ಎನ್ನವನು ಕರೆಯಬಹರೋ ೬

ಪದುಳವೇ ನಮ್ಮವರ
ಪದಪದ್ಮ ಎನ್ನುವೆನು
ಪದಪಿಂದ ಕರೆದೊಯ್ಯಲೊಲ್ಲರೇಕೆ
ಉದಯಾಸ್ತಮಾನದಲಿ
ಕುದಿದು ಕೋಟಲೆಗೊಂಬೆ
ಹೃದಯ ತಾ ಕರಗದೇ ನಮ್ಮವರಿಗೆ ೭

ಅಳಲುವೆನು ಮನದೊಳಗೆ
ಬಳಲುವೆನು ಬಾರದಿರೆ
ಕಳೆಯೇರುವೆನು ಒಮ್ಮೆ ನೆನೆದು ನೆನೆದು
ಮಲಹರಣ ಶರಣರಾ
ಬಲವ ನೋಡುವೆನೊಮ್ಮೆ
ಸಲೆಯೆನ್ನ ಕನಸಿಂಗೆ ಬಾರರೆನುತ ೮

ಹಿಂದುಳಿಯಿತಮವಾಸ್ಯೆ
ಮುಂದೆ ಹುಣ್ಣಿಮೆ ಬಂತು
ಎಂದಿಗೇ ಎನ್ನನ್ನು ಕರೆಯಬಹರೋ
ನೊಂದು ಸುಯ್ಗರೆಯುವೆನು
ಬೆಂದು ಬೆಂಡಾಗುವೆನು
ಚಂದವೇ ತಮಗೆನ್ನ ನೋಡದಿಹುದು ೯

ತರಗಲೆಯು ಗಿರುಕೆನಲು
ಹೊರಗೆ ನಾನಾಲಿಸುವೆ
ಬರವಿಲ್ಲದಿರೆ ಮನದಿ ಸುಯ್ಗರಿವೆನು
ಪರರ ಶಿಶುವೆಂದೆನುತ
ಶರಣರೂ ಎನ್ನವರು
ಮರೆದರೋ ಎಂದೆನುತ ಹೆದರುತಿಹೆನು ೧೦

ಶರಣರೊಳು ಸುಖ ದುಃಖ
ದಿರವ ಹೇಳುವೆ ನಾನು
ಪರರೆನ್ನ ಚಿಂತೆಯನ್ನರಿಯರಾಗಿ
ಅರಸು ಷಡಕ್ಷರಿಯ
ವರನೆನ್ನ ಕಾಡದಿರೆ
ಶರಣರಿಗೆ ಪೇಳಿ ನಾ ಕೇಳ್ವೆನಯ್ಯಾ ೧೧

ಗಿಳಿಯು ಪಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ, ಬರವ ಹಾರುತ್ತಿದ್ದೆನೆಲೆಗವ್ವ! ತರಗಲೆ ಗಿರಿಕೆಂದಡೆ ಹೊರಗನಾಲಿಸುವೆ. ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವ. ಕೂಡಲ ಸಂಗನ ಶರಣರು ಬಂದು ಬಾಗಿಲ ಮುಂದೆ ಶಿವಾ ಎಂದಡೆ ಸಂತೋಷಬಟ್ಟೆನೆಲೆಗವ್ವ.

—ಬಸವಣ್ಣನವರು

# ನಿಮ್ಮನು ನೆನೆವ ಮನವ ಬಯಸುವೆನು

ರಾಗ : ಸಾವೇರಿ — ತಾಳ : ಝಂಪೆ

ಎನಗೆ ನಿಮ್ಮನೆ ನೆನೆವ
ಮನವನೇ ಬಯಸುವೆನು
ಘನವಾಗಿ ಇದರಿಂದ ಮೇಲರಿಯೆನು ॥ಪ॥

ನಿಮ್ಮ ನೆನೆವುದೆ ಹರುಷ
ನಿಮ್ಮ ನೆನೆವುದೆ ಪರುಷ
ನಿಮ್ಮ ನೆನೆವುದೆ ಕಾಮಧೇನುವೆನಗೆ
ನಿಮ್ಮ ನೆನೆವುದೆ ಗತಿಯು
ನಿಮ್ಮ ನೆನೆವುದೆ ಮತಿಯು
ನಿಮ್ಮ ನೆನೆವುದೆ ಇಹದ ಪರದ ಸುಖವು ೧

ನಿಮ್ಮ ನೆನೆವುದೆ ತಪವು
ನಿಮ್ಮ ನೆನೆವುದೆ ಜಪವು
ನಿಮ್ಮ ನೆನೆವುದೆ ಸಕಲ ಪರಮ ತತ್ವ
ನಿಮ್ಮ ನೆನೆವುದೆ ನಿತ್ಯ
ನಿಮ್ಮ ನೆನೆವುದೆ ಸತ್ಯ
ನಿಮ್ಮ ನೆನೆವುದೆ ವ್ಯಕ್ತ ಕೈಲಾಸವು ೨

ತನು ದಂಡನೆಯ ಮಾಡಿ
ಜಿನಗುಲೇತಕೆ ನಾನು
ಘನಗಿರಿಯ ಮೇಲೆ ತಪವಿರಲೇಪಕೆ
ಮನಸಿಜಾರಿಯೆ ನಿನ್ನ
ನೆನಹು ಮನದೊಳು ನೆಲಿಸೆ
ಘನಪರಮ ಕೈಲಾಸ ತನ್ನೊಳಿಹುದು ೩

ಹಲವು ತೀರ್ಥವು ಕ್ಷೇತ್ರ
ಹಲವು ಗಿರಿಗಹ್ವರವು
ತೊಳಲಿ ಬಳಲುತ್ತಿರುವುದೇಕೆ ದೇವ
ಮಲಹರನ ನೆನಹು ತಾ
ನೆಲಸಿರಲು ಮನದೊಳಗೆ
ಹಲವನರಸುವದೇನು ತಾನೆ ಶಿವನು ೪

ಸುರಲೋಕವೇನೆನಗೆ
ನರಲೋಕವೇನೆನಗೆ
ಉರಗಮಯ ಲೋಕವು ತಾನಾದಡೇನು
ಗುರು ಷಡಕ್ಷರಿವರನ
ಪರಮ ಮಂತ್ರದ ನೆನಹು
ದೊರೆಕೊಳಲು ಶಿವಲೋಕ ತಾನಿರ್ಪುದು ೫

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ, ಅಂಬುಜಕ್ಕೆ ಭಾನುವಿನ ಉದಯದ ಚಿಂತೆ, ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ, ಎನಗೆ ಎಮ್ಮ ಕೂಡಲಸಂಗಮದೇವರ ನೆನೆವ ಚಿಂತೆ.

— ಬಸವಣ್ಣನವರು

* * *

## ಎನ್ನ ಕರದೊಳಗಿರ್ದು ಏಕೆ ನುಡಿಯೆ ?

ರಾಗ : ಮುಖಾರಿ — ತಾಳ : ಝಂಪೆ

ಎನ್ನ ಕರದೊಳಗಿರ್ದು
ಎನ್ನೊಳೇತಕೆ ನುಡಿಯೆ
ಎನ್ನ ಭವಭವದಲ್ಲಿ ಬಿಡದಾಳ್ದನೆ ॥ಪ॥

ಎನ್ನ ಚಿಂತಾಮಣಿಯೆ
ಎನ್ನ ಪರುಷದ ಕಣಿಯೆ
ಎನ್ನ ಬೇಡಿದುದೀವ ಸುರಭೂಜವೆ
ಎನ್ನ ಸಂಜೀವನವೆ
ಎನ್ನ ಪರಮಾಯುವೆ
ಎನ್ನ ಕರದೊಳಗಿರ್ದು ಏಕೆ ನುಡಿಯೆ ೧

ಎನ್ನ ಗತಿಮತಿಯು ನೀ
ನೆನ್ನ ಚೈತನ್ಯವೇ
ಎನ್ನನಗಲದೆ ಕೂಡಿ ಬಿಡದಾಳ್ದನೆ
ಎನ್ನ ಇಹಪರ ಸುಖವೆ
ಎನ್ನ ಮುಕ್ತಿಯ ಸಿರಿಯೆ
ಎನ್ನ ಕರದೊಳಗಿರ್ದು ಏಕೆ ನುಡಿಯೆ ೨

ಎನ್ನ ಭಾಗ್ಯದ ವಧುವೆ
ಎನ್ನ ಭಕ್ತಿಯ ನಿಧಿಯೆ
ಎನ್ನ ಮನವೆಂಬ ವನಿತೆಯ ತಿಲಕವೆ
ಎನ್ನ ಹೃದಯಾಲಯದ
ಚಿನ್ಮಯದ ಮೂರ್ತಿಯೇ
ಎನ್ನ ಕರದೊಳಗಿರ್ದು ಏಕೆ ನುಡಿಯೆ ೩

ಎನ್ನ ಮಾತೆಯು ನೀನೆ
ಎನ್ನ ತಾತನು ನೀನೆ
ಎನ್ನ ಬಂಧುವು ಬಳಗ ಸಖನು ನೀನೆ
ಎನ್ನ ಪತಿಯೂ ನೀನೆ
ಎನ್ನ ಹಿತನೂ ನೀನೆ
ಎನ್ನ ಕರೆದೊಳಗಿರ್ದು ಏಕೆ ನುಡಿಯೆ ೪

ಎನ್ನ ಕುಲಗುರುವೆ ನೀ
ಎನ್ನ ವಿದ್ಯಾಗುರುವೆ
ಎನ್ನ ಭವ ಭವದಲ್ಲಿ ಬಿಡದ ಗುರುವೆ
ಎನ್ನ ದೀಕ್ಷಾ ಗುರುವೆ
ಎನ್ನ ಮೋಕ್ಷಾ ಗುರುವೆ
ಎನ್ನ ಕರದೊಳಗಿರ್ದು ಏಕೆ ನುಡಿಯೆ ೫

ಎನ್ನ ಮನವನ ಚೈತ್ರ
ಎನ್ನ ಘನಸುಖಪಾತ್ರ
ಎನ್ನ ಭವವೆಂಬ ವಾರುಧಿಗೆ ಛೈತ್ರ
ಎನ್ನ ಜ್ಞಾನದ ನೇತ್ರ
ಎನ್ನ ಪುಣ್ಯದ ಗಾತ್ರ
ಎನ್ನ ಕರದೊಳಗಿರ್ದು ಏಕೆ ನುಡಿಯೆ ೬

ಎನ್ನನಿಲ್ಲಿಗೆ ತಂದು
ಭಿನ್ನವನು ಮಾಡಿದ್ಯೆ
ಅನ್ಯವೇ ನಾ ನಿನಗೆ ಹೇಳು ಗುರುವೇ
ಎನ್ನೊಡನೆ ನುಡಿಯದಿರೆ
ನಿನ್ನನಾ ಭವಭವದಿ
ಬೆನ್ನ ಬಿಡುವೆನೆ ಷಡಕ್ಷರಿ ಲಿಂಗವೇ ೭

ನೀನು ದುಂಡುಮುಂಡಲಕ್ಕೆ ಹೋದೆನೆಂದೊಡೆ ನಾನು ಸುಮ್ಮನಿಹೆನು. ನೀನು ಎನ್ನ ಕೈಯೊಳಗಿರ್ದು ಎನ್ನ ಮನದೊಳಗಿರ್ದು ನುಡಿಯದಿರ್ದಡಾನು ಎಂತು ಸೈರಿಸುವೆನಯ್ಯ ? ನೇಹವೆಂಬ ಕುಂಟಿಣಿ ಚೆನ್ನಮಲ್ಲಿಕಾರ್ಜುನನೊಲಿಸದಿದ್ದರೆ ಇನ್ನೇವೆ ಸಖಿಯೆ ?

—ಅಕ್ಕ ಮಹಾದೇವಿ

# ಎಲೆ ಆತ್ಮನೆ

ರಾಗ : ಬಾಗೇಶ್ರಿ — ತಾಳ : ಝಂಪೆ

ತನುವಿಡಿದ ದುಷ್ಕೃತವ
ನೆನಿತೆನಲು ಪೇಳುವೆನು
ಮನವೊಲಿದು ಕೇಳು ನೀನೆಲೆಯಾತ್ಮನೆ ॥ಪ॥

ಅನ್ನ ಉದಕದ ಚಿಂತೆ
ಎಣ್ಣೆ ನೀರಿನ ಚಿಂತೆ
ಬಣ್ಣ ಬಳಿದಾಭರಣ ತೊಡುವ ಚಿಂತೆ
ಮಣ್ಣು ಮನೆಗಳ ಚಿಂತೆ
ಹೊನ್ನು ಹೆಣ್ಣಿನ ಚಿಂತೆ
ಇನ್ನು ಪುತ್ರರ ಬೇಡಿ ಬಳಲ್ವ ಚಿಂತೆ ೧

ಅರಸುಗಳ ಭಯವಿದಕೆ
ಚರಿಪ ಚೋರರ ಭಯವು
ಮರಳಿ ಅಗ್ನಿಯ ಭಯವು ನೀರ ಭಯವು
ಉರಗ ವ್ಯಾಘ್ರನ ಭಯವು
ಅರಿ ರೋಗಗಳ ಭಯವು
ಕರಕಷ್ಟತನುವಿದಕೆ ಭಯವು ನೋಡಾ ೨

ಶೀತೋಷ್ಣಗಳ ಭೀತಿ
ಭೂತಪ್ರೇತದ ಭೀತಿ
ಓತು ನಡಿಯಲು ಮುಳ್ಳು ನಡುವ ಭೀತಿ
ಮಾತು ಮಾರನ ಭೀತಿ
ರಾತ್ರಿ ಹಗಲಿನ ಭೀತಿ
ಈ ತನುವ ಹಿಡಿದಿನಿತು ಭೀತಿ ನೋಡಾ ೩

ಆಗಲದಕೇನೆನಲು
ಸಾಗಿಸಲು ನಿನಗಿವನು
ಆಗಬಹುದೆ ಧರೆ ಗಗನವುಳ್ಳತನಕ
ಆಗ ಹುಟ್ಟಿದ ಬಳಿಕ
ಬೇಗ ಸಾವೀ ತನುವ
ಹಾಗೆ ಮನವೇ ನೀನು ನಂಬಬಹುದೆ ೪

ಇಂತಪ್ಪ ತನುವಿನ
ಚಿಂತೆಯಳಿದಾ ಲಿಂಗ
ಭ್ರಾಂತಿಯೊಳಗಿರು ನಿನಗೆ ಸುಖ ತಪ್ಪದು
ಮುಂತೆ ನಿನ್ನುವನು ತ-
ನ್ನಂತೆ ಮಾಡುವನೊಲಿದು
ಕಂತುಹರ ಶಿವ ಷಡಕ್ಷರಿ ಲಿಂಗವು ೫

ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡರ ಚಿಂತೆ, ಹೆಂಡರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕಿನ ಚಿಂತೆ, ಬದುಕಾದರೆ ಕೇಡಿನ ಚಿಂತೆ, ಕೆಡದಿರೆ ಮರಣದ ಚಿಂತೆ. ಇಂತೀ ಹಲವು ಚಿಂತೆಯುಲ್ಲಿಪ್ಪವನ ಕಂಡೆನು. ಶಿವಚಿಂತೆಯುಲ್ಲಿದ್ದವರ ಒಬ್ಬರನೂ ಕಾಣೆನೆಂದಾತ ನಮ್ಮ ಅಂಬಿಗರ ಚೌಡಯ್ಯ ನಿಜ ಶರಣನು.

— ಅಂಬಿಗರ ಚೌಡಯ್ಯ

* * *

## ಎನ್ನ ಬರಿಸದಿರು

ರಾಗ : ಕಾಂಬೋದಿ — ತಾಳ : ಝಂಪೆ

ಧರೆಯುತ್ತಲೆನ್ನನ್ನು
ಬರಿಸದಿರು ಸದ್ಗುರುವೆ
ಧರೆಯ ಪಾಪದೊಳು ನಾ ಜನಿಸಲಾರೆ ||ಪ||

ಹುಸಿ ಕಳವು ಡಂಭಕವು
ನುಸುಳು ಆರಡಿ ತಳ್ಳಿ
ಹಿಸುಣ ಹೀನದಯದ ಶಬ್ದಗಾರ
ಕಿಸುಕುಳವು ಕೊರಚಾಟ
ವಿಷಮ ವಿಗಡವು ಕರುಬು
ಹೊಸ ಹುರುಡು ಜಾರರಾ ಜನ್ಮಾಲಯ ೧

ನಿರುದಯವು ನಿಷ್ಠುರವು
ದುರುಳತ್ವ ಧಾಳಕವು
ಪರಬಂಧಕವು ಡಂಭವಪವಾದವು
ನೆರೆಚೆಂಡಿತನ ಪೊಲಬು
ಪರಧನದ ವಂಚನೆಯು
ಪರರ ಕೆಡಿಸುವ ಸಿದ್ಧಿಗಳು ಮಂತ್ರದ ೨

ಹರನರ್ಚಕರು ಅಲ್ಪ
ಪರನಿಂದಕರು ಬಹಳ
ಗುರುಭಕ್ತರಲ್ಪ ಗರುವಿಗಳು ಬಹಳ
ಹರಶ್ರುತಿಯು ಬಿಟ್ಟು ತಾ
ನರಸ್ಮೃತಿಯ ಲಾಲಿಪರು
ನಿರಯದಾಲಯವಾಗಿ ತೋರುತಿಹರು ೩

ಪತಿವ್ರತೆಯರಿಲ್ಲ ಪರ-
ಸತಿ ಮುಖಿಯರಿರುತಿಹರು
ಜಿತಕಾಮರಿಲ್ಲ ಅತಿಕಾಮರಿಹರು
ವ್ರತ ನೇಮಗಳು ಇಲ್ಲ
ಕೃತಕಿಗಳು ಘನವಯ್ಯ
ಕ್ಷಿತಿಯು ಅವಗುಣಿಗಳಿಗೆ ತವರು ಮನೆಯು ೪

ಇಲ್ಲವೆನಬಾರದೆಲೆ
ಇಲ್ಲುಂಟು ಧರ್ಮಗಳು
ಕಲ್ಲೊಳಗೆ ಅಡಿಗಿರ್ಪ ಪರುಷದಂತೆ
ಖುಲ್ಲಮಾನವ ನಿನಗೆ
ಒಳ್ಳಿದರು ಕಾಣಿಸರು
ಒಲ್ಲೆ ಮರ್ತ್ಯರ ಷಡಕ್ಷರಿ ಲಿಂಗವೆ ೫

ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟರೆ, ನಿಮ್ಮ ನಗುವರಯ್ಯಾ. ಶಿವಬಟ್ಟೆಯಲೆನ್ನನು ಇರಿಸಯ್ಯಾ. ಹರನೆ ಹೊಲಬುಗೆಟ್ಟೆನು. ಬಟ್ಟೆಯ ತೋರಯ್ಯಾ. ಹುಯ್ಯಲಿಟ್ಟೆನು ಗಣಂಗಳು ಕೇಳಿರಯ್ಯಾ. ಕೂಡಲಸಂಗಮದೇವಯ್ಯಾ ಎನ್ನ ಕಾಡಿಹನಯ್ಯಾ.

— ಬಸವಣ್ಣನವರು

* * *

## ಕೇಳಕ್ಕ

ರಾಗ : ಮಲಹರಿ

ನಮ್ಮ ಮನೆಯ ಕೇಳಕ್ಕ
ಬ್ರಹ್ಮ ಬಂದೆಡೆಗೊಂಡು
ನಮ್ಮ ಮನೆಯ ಸುತಬಂಧುಗಳ ಕೊಂದಿತು ॥ಪ॥

ಏಳು ಮಕ್ಕಳ ಕೊಂದು
ಏಳು ತೊತ್ತಿರ ಕೊಂದು
ಮೇಲ್ವೈವರಣ್ಣಗಳ ಕೊಂದಿತಕ್ಕ
ಕಾಳಿನೊಳಗಿರುತಿರ್ಪ
ಜಾಳಿಗೆಲ್ಲವ ತಿಂತು
ಬಾಳಲೀಸದು ಮನೆಯನೆಲ್ಲರಂತೆ ೧

ಮೂರು ಕರುಗಳ ಕೊಂದು
ಮೂರು ಪಶುಗಳ ಕೊಂದು
ಮೂರೈದು ಕೋಣಗಳ ಕೊಂದಿತಕ್ಕ
ಮೂರು ಸೊಸೆಯರ ಕೊಂದು
ಮೂರಳಿಯರನು ಕೊಂದು
ಕೇರಿಕೇರಿಗಳಲ್ಲಿ ಹರಿಯುತಿದಕೊ ೨

ಜಡೆಗಳನು ಕೆದರಿ ತಾ
ಹಿಡಿದು ಶೂಲದಿ ಪೆಣನ
ಬಿಡದೆ ಮೈಯೊಳು ಹಾವ ತೊಡರಿಸಿಹುದು
ಕಡಿದ ತಲೆ ಕರದೊಳಗೆ
ಮಡಿದ ತಲೆ ಕೊರಳೊಳಗೆ
ಬಿಡದೆನ್ನನಂಜಿಸುತ ಬರುತಲಿದಕೊ ೩

ಇರುಳು ಸುಳಿಯುಲಿಕಂಜಿ
ಪುರ ಮೂರು ಹಾಳಾಗಿ
ನೆರೆದ ಜನರುಗಳೆಲ್ಲ ಓಡಿತಕ್ಕ
ಪುರಪುರದ ಮಧ್ಯದಲಿ
ಉರಿವುತ್ತ ತಿರುಗುತಿದೆ
ಇರುಳು ನಾ ಕಣ್ಮುಚ್ಚಲಮ್ಮೆನವ್ವ ೪

ಇನ್ನೇನನೆನ್ನುವೆನು
ಬೆನ್ನ ಬಿಡದಕ್ಕಯ್ಯ
ತನ್ನನಗಲುವಳೆಂದು ಹಿಂದು ಮುಂದು
ಎನ್ನ ಕಾದಿರುತಿಹುದು
ತನ್ನ ಹೆಸರೇನೆನಲು
ಚೆನ್ನಿಗ ಷಡಕ್ಷರಿಯ ಲಿಂಗವಂತೆ ೫

# ಮಾಯೆ ನೀನತಿ ಚೆಲುವೆ

ರಾಗ : ಕಾನಡಾ — ತಾಳ : ಝಂಪೆ

ಮಾಯೆ ನೀನತಿ ಚೆಲುವೆ
ಕಾಯ ಮುನ್ನವೆ ಚೆಲುವು
ಹೇಯವಾಯಿತು ಒಳಗನರಿತ ಬಳಿಕ ॥ಪ॥

ನಿನ್ನ ಮುಖ ಚಂದ್ರನೊಲು
ನಿನ್ನಕ್ಷಿ ಕಮಲದಳ
ನಿನ್ನ ಕುಚ ಪೊಂಗಳಸದಂತೆ ಮಾಯೆ
ನಿನ್ನಂಗ ಕನಕಲತೆ
ನಿನ್ನಧರ ಬಿಂಬಫಲ
ನಿನ್ನನೀಕ್ಷಿಸಿ ಸೋಲದವರಾರೆಲೆ ೧

ನಿನ್ನ ಮೃದು ವಚನಕಂ
ನಿನ್ನ ದೈನ್ಯೋಕ್ತಿಗಂ
ನಿನ್ನ ಕಡೆಗಣ್ನೋಟದಾ ಭಾವಕೆ
ನಿನ್ನ ನಸು ಮುನಿಸಿಗಂ
ನಿನ್ನ ಚಾತುರ್ಯಕಂ
ನಿನ್ನ ಬೆಳುನಗೆಗೆ ಸೋಲದವರಾರು ೨

ಅಣ್ಣ ತಮ್ಮನು ತಂದೆ
ಚೆನ್ನಪುತ್ರನು ಅಳಿಯ
ಇನ್ನುಳ್ಳ ಪುರುಷರಾದವರೆಲ್ಲರ
ನಿನ್ನ ಮೋಹವು ಎಂಬ
ಉನ್ನತದ ಪಾಶದಲಿ
ತಿಣ್ಣನೇ ಬಿಗಿದಿರ್ಪೆ ನುಸುಳ್ವರಾರು ೩

ನಿನ್ನೊಳಗೆ ಕಾಲನಿಹ
ನಿನ್ನೊಳಗೆ ಕಾಮನಿಹ
ನಿನ್ನೊಳಗೆ ನೇಣು ಕತ್ತರಿಗಳಿಹವು
ನಿನ್ನೊಳಗೆ ವಿಷವಿಹುದು
ನಿನ್ನೊಳಗೆ ನರಕಗಳು
ಇನ್ನು ನಿನ್ನನು ಗೆಲುವರಾರು ಮಾಯೆ ೪

ಕಾಮಕಾಲಗಳಿಂ ನಿ-
ರ್ನಾಮ ಮಾಡುವ ಮಾಯೆ
ಭೀಮನೆನಿಸುವ ಷಡಕ್ಷರಿ ಲಿಂಗವ
ನಾ ಮರೆಯ ಹೊಕ್ಕನೆಲೆ
ಛೀ ಮಾರಿ ಹೋಗತ್ತ
ನೀ ಮುನ್ನ ದುಶ್ಚರಿತೆಯೊಳಗರಿದೆನು ೫

ಅವಳ ವಚನ ಬೆಲ್ಲದಂತೆ- ಹೃದಯದಲಿಪ್ಪುದು ನಂಜು ಕಂಡಯ್ಯ. ಕಂಗಳಲೊಬ್ಬನ ಕರೆವಳು. ಮನದಲೊಬ್ಬನ ನೆನೆವಳು. ಕೂಡಲ ಸಂಗಮದೇವ ಕೇಳಯ್ಯ ಮಾನಿಸ ಗಳ್ಳಿಯ ನಂಬದಿರಯ್ಯ.

—ಬಸವಣ್ಣನವರು

* * *

## ಇನ್ನೆನಗೆ ಭಯವುಂಟೆ

ರಾಗ : ಕಲ್ಯಾಣಿ — ತಾಳ : ಝಂಪೆ

ಎನ್ನ ಕಾಯವು ನಿನಗೆ
ಉನ್ನತಾಲಯವಾಯಿ-
ತಿನ್ನೆನಗೆ ಭಯವುಂಟೆ ಎಲೆ ಲಿಂಗವೇ ॥ಪ॥

ಎನ್ನ ಕಾಲುಗಳೆರಡು
ಉನ್ನತದ ಕಂಭವೈ
ಎನ್ನ ಒಡಲೇ ನಿಮಗೆ ದೇವಾಲಯು
ಎನ್ನ ತೋಳುಗಳೆರಡು
ಉನ್ನತದ ಮದನಕೈ
ಎನ್ನ ಶಿರ ಸೌವರ್ಣ ಕಲಶವಯ್ಯ ೧

ಎನ್ನ ಕಿವಿ ಕೀರ್ತಿಮುಖ
ಎನ್ನ ನಾಲಿಗೆ ಘಂಟೆ
ಎನ್ನ ನಯನಗಳೆರಡು ಜ್ಯೋತಿ ನಿಮಗೆ
ಎನ್ನ ಮುಖವೇ ದ್ವಾರ
ಎನ್ನ ದಂತವೆ ಅದಕೆ
ಮಿನ್ನುತಿಹ ಮೌಕ್ತಿಕದ ಸೂಸಕಗಳು ೨

ಎನ್ನಧರ ಜವಳಿಗದ
ಎನ್ನ ನಾಸಾಪುಟವು
ನನ್ನಿಯಿಂ ಸೌರಭ್ಯ ರಸಘುಟಿತವು
ಚನ್ನಾಗಿ ಬೀಸುವ
ಹೊನ್ನ ಜಾಳೀಂದ್ರವೈ
ಇನ್ನುಳ್ಳ ಉಪಕರಣವೆಂತೆಂದೆನೆ ೩

ಎನ್ನ ಸಮತೆಯೆ ಜಲವು
ಎನ್ನ ಸದ್ಗುಣ ಗಂಧ
ಎನ್ನ ನಿತ್ಯತ್ವವೇ ಅಕ್ಷತೆಗಳು
ಎನ್ನ ಜ್ಞಾನವೆ ಪುಷ್ಪ
ಎನ್ನ ಭಕ್ತಿಯೆ ಬೋನ
ಎನ್ನ ಮನವೇ ನಿಮಗೆ ಪೂಜಾರಿಯು ೪

ಇಂತಪ್ಪ ಪೂಜೆಯನು
ಸಂತಸದಿ ಕೈಕೊಳುತ
ಕಂತುಹರ ಶಿವಷಡಕ್ಷರಿ ಲಿಂಗವು
ಮುಂತೆ ಎನ್ನೊಳಗೆ ನಿ-
ಶ್ಚಿಂತನಾಗಿರುತಿರಲು
ಚಿಂತೆಯುಂಟೇ ಹಲವು ಭವಭೀತಿಯ ೫

ಉಳ್ಳವರು ಶಿವಾಲಯವ ಮಾಡುವರು. ನಾನೇನ ಮಾಡುವೆ ಬಡವನಯ್ಯ. ಎನ್ನ ಕಾಲೇ ಕಂಭ. ದೇಹವೇ ದೇಗುಲ. ಶಿರವೇ ಹೊನ್ನಗಳಸವಯ್ಯ. ಕೂಡಲಸಂಗಮ ದೇವ ಕೇಳಯ್ಯ. ಸ್ಥಾವರಕ್ಕಳಿವುಂಟು. ಜಂಗಮಕ್ಕಳಿವಿಲ್ಲ.

—ಬಸವಣ್ಣನವರು

* * *

## ಲಿಂಗವೆ

ರಾಗ : ನಾಟಿ — ತಾಳ : ಝಂಪೆ

ಘನಮಹಿಮ ಲಿಂಗವೆ
ಅನುಪ್ರಾಣಿ ಎನ್ನ ಕರ-
ವನಜಕ್ಕೆ ಬಂದು ಚುಳುಕಾದಿರಲ್ಲ ॥ಪ॥
ತರಣಿಕೋಟಿಯ ಪ್ರಭೆಯ

ಕಿರಿದೆನಿಪ ಬೆಳಗಿನಾ
ವರಹೇಮಶೈಲಾಗ್ರದೊಳಗೊಪ್ಪುವ
ಹರಗಣಂಗಳ ಸುಖವ
ನೆರೆಯುಳಿದು ಎನ್ನ ಕರ
ಸರಸಿಜಕೆ ಬಂದು ಚುಳುಕಾದಿರಲ್ಲ ೧

ಹರಿಯಜರ ತಿಂಥಿಣಿಯು
ಸುರರುಗಳ ಮೊತ್ತವಾ
ವರಮುನೀಶ್ವರರುಗಳ ಸಂತಾನದ
ಹರುಷದಾನಂದದೊಳು
ನೆರೆಯುಳಿದು ಎನ್ನ ಕರ
ಸರಸಿಜಕೆ ಬಂದು ಚುಳುಕಾದಿರಲ್ಲ ೨

ಹರಿಗೆ ನಿಲುಕದ ಚರಣ
ಸರಸಿಜಭವನೊಮ್ಮೆ
ಅರಸಿಕಾಣದ ನಿಮ್ಮ ಶ್ರೀ ಮುಕುಟವು
ಪರಮವಾಚಾತೀತ
ಕಿರಿದಾಗಿಯೆನ್ನಕರ
ಸರಸಿಜಕೆ ಬಂದು ಚುಳುಕಾದಿರಲ್ಲ ೩

ಮಡದಿ ಗಿರಿಜಾತೆಯನು
ತೊಡೆಯ ಮೇಲಿಂದಿಳುಹಿ
ಒಡನೆ ಗುಹ ಗಣರಾಯ ವೀರೇಶರೆನಿಪ
ಕಡುಮೋಹದತಿ ಸುತರ
ಬಿಡುತೆನ್ನ ಕರದೊಳಗೆ
ಒಡೆಯರೊಡೆಯನೆ ಬಂದು ಚುಳುಕಾದಿರಲ್ಲ ೪

ಎನ್ನಲ್ಲಿಯುಪಚಾರ-
ವಿನ್ನೇನು ನಿಮಗುಂಟು
ಸನ್ನುತದ ಶಿವಷಡಕ್ಷರಿ ಲಿಂಗವೆ
ಎನ್ನ ಮನ ಪ್ರಾಣಗಳು
ಹೊನ್ನು ಹಾವಿಗೆಯಾಗಿ
ನಿನ್ನ ಚರಣಕೆ ಯೋಗ್ಯ ಮೆಟ್ಟಾಗಲಿ ೫

ಜಗದಗಲ, ಮುಗಿಲಗಲ, ಮಿಗೆಯಗಲ, ನಿಮ್ಮಗಲ, ಪಾತಾಳದಿಂದಿತ್ತಿತ್ತ ನಿಮ್ಮ ಶ್ರೀ ಚರಣ. ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ. ಅಗಮ್ಯ, ಅಪ್ರಮಾಣ, ಅಗೋಚರ, ಅಪ್ರತಿಮ ಲಿಂಗವೆ ಕೂಡಲಸಂಗಮದೇವಯ್ಯ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ. —ಬಸವಣ್ಣನವರು

* * *

## ಉಳುಹಿರಯ್ಯ

ರಾಗ : ಮಾಲಕಂಸ — ತಾಳ : ಝಂಪೆ

ಭವಕಾಟಕಾರದಲಿ
ಶಿವಶರಣರ ಮನೆಯ
ತವೆ ದ್ವಾರದೊಳು ಬಿದ್ದೆನುಳುಹಿರಯ್ಯ ॥ಪ॥

ಹೇಸಿ ಮಾನವ ನಾನು
ಭಾಷೆವಂತನು ಅಲ್ಲ
ಈಶನೊಳು ಸಲುಗೆಯೆನಗೆಂತಪ್ಪುದೋ
ಘಾಸಿಯಾದೆನು ಭವದಿ
ಓಸರಿಸದೆ ಎನ್ನ
ಈಶನಂಘ್ರಿಗೆ ಒಲಿದು ಸಲಿಸಿರಯ್ಯ ೧

ಉದ್ಧರಿಸುವರ ಕಾಣೆ
ಇದ್ದೆಸೆಯ ಕೆಡಿಸಿದೆನು
ಹೊದ್ದುವೆನು ಇನ್ನಾವ ದೆಸೆಯ ನಾನು
ಬಿದ್ದೆ ನಿಮ್ಮಂಗಳದಿ
ಉದ್ಧರಿಸಿಯಲ್ಲದೊಡೆ
ಒದ್ದು ಕಡೆಗೆನ್ನನ್ನು ನೂಕಿರಯ್ಯ ೨

ನೀತಿಯರಿಯದೆ ನಾನು
ಪಾತಕದ ನಡೆಯಲ್ಲಿ
ಭೂತಳದೊಳಂ ನಡೆದ ಗತಿಯಾವುದು
ಓತು ಕರುಣಿಸಿ ನೀವು
ಪಾತಕಾಭ್ರಕೆ ಜಂಝು
ವಾತವೆಂಬುದ ಕೇಳಿ ಬಂದೆ ನಾನು ೩

ತಪ್ಪ ನೋಡದೆ ಎನ್ನ
ಒಪ್ಪವಿಟ್ಟು ನಡಿಸಿ
ತಿಪ್ಪೆಯನು ಬಗೆದಲ್ಲಿ ಏನಿಪ್ಪುದು
ಸರ್ಪಧರ ನಿಮಗಂಜಿ
ಇಪ್ಪೆನಾಗಿಯು ನಿಮಗೆ
ಅಪ್ಪದಪ್ಪದದೊಂದು ಉಂಟೆ ಹೇಳಿ ೪

ಎಲ್ಲಾ ಪುರಾತನರು
ಎಲ್ಲಿ ನೆನೆದಲ್ಲಿ ಎ-
ನ್ನಲ್ಲಿ ಇಪ್ಪುದ ನಾನು ಬಲ್ಲೆನಾಗಿ
ಇಲ್ಲಿ ನತನಾಗಿ ನಾ-
ನಿಲ್ಲಿ ಕೃಪೆಯನು ಪಡೆದೆ
ಸಲ್ಲಲಿತ ಶಿವ ಷಡಕ್ಷರಿಲಿಂಗವೆ ೫

ಆಸತ್ತು ನೆಲಸಿಹೆನೆಂದರೆ ಮಾಣದು, ಬೇಸತ್ತೆ ಬೆಂಬಿದ್ದೆನೆಂದರೆ ಮಾಣದು. ಏವೆನೇವೆನೆಂದರೆ ಮಾಣದು. ಕಾಯದ ಕರ್ಮದ ಫಲಭೋಗವು. ಕೂಡಲಸಂಗನ ಶರಣರು ಬಂದು ಹೋ ಹೋ ಅಂಜದಿರೆಂದಡಾನು ಬದುಕುವೆನು.

—ಬಸವಣ್ಣನವರು

# ಸರ್ವಾಂಗವನು ಸಲಿಸುವೆನು

ರಾಗ : ಮಾಳವಗೌಳ — ತಾಳ : ಝಂಪೆ

ಎನ್ನ ಸರ್ವಾಂಗವನು
ನಿನ್ನ ಪರಿಣಾಮಕ್ಕೆ
ಚೆನ್ನಾಗಿ ಸಲಿಸುವೆನು ಎಲೆ ಲಿಂಗವೆ ॥ಪ॥

ಎನ್ನ ಹೃದಯವು ನಿಮಗೆ
ಉನ್ನತದ ಮನೆಯಯ್ಯ
ಎನ್ನ ಮುಖ ಮುಖಶಾಲೆ ನಿಮಗಪ್ಪುದು
ಎನ್ನ ನವ ಚಕ್ರಗಳು
ಬಿನ್ನಣದ ನವ ನೆಲೆಯು
ಹೊನ್ನ ಉಪ್ಪರಿಗೆಯಾಗಿಪ್ಪುದಯ್ಯ ೧

ಎನ್ನ ಹೃತ್ಕಮಲವದು
ರನ್ನಖಚಿತಗಳಪ್ಪ
ನಿನ್ನ ಶಯನಕೆ ಮಂಚಮಾಗಿರ್ಪುದು
ಎನ್ನ ಜ್ಞಾನವು ನಿಮಗೆ
ಉನ್ನತದ ತಲೆಗಿಂಬು
ಎನ್ನಯಾಚಾರವೇ ಚರಣ ಭಟನು ೨

ಎನ್ನ ಶ್ರೋತ್ರವು ನಿಮ್ಮ
ಸನ್ನುತದ ನುಡಿಗಳನು
ಭಿನ್ನವಿಲ್ಲದೆ ಕೇಳ್ವ ದಾಸಿ ನಿಮಗೆ
ಎನ್ನ ತ್ವಕ್ಕದು ಚಲುವ
ನಿನ್ನ ಚರಣವ ತೊಳೆವ
ಮನ್ನಣೆಯ ತೊತ್ತಾಗಿ ಇರ್ಪುದಯ್ಯ ೩

ಎನ್ನ ನಯನವು ನಿಮಗೆ
ರನ್ನವೆಳಗಿನ ಜ್ಯೋತಿ
ಎನ್ನ ಪ್ರಾಣವು ನಿಮಗೆ ಗಂಧಭರಣಿ
ಎನ್ನ ಜಿಹ್ವೆಯು ನಿಮಗೆ
ಮನ್ನಣೆಯ ತಾಂಬೂಲ
ಹೊನ್ನ ಪಡಿಗಮದಾಗಿ ಮೆರೆದಿರ್ಪುದು ೪

ಎನ್ನ ಕೈಗಳೆಯೆರಡು
ನಿನ್ನ ಪಾದವನೊಲಿದು
ಚೆನ್ನಾಗಿ ತೊಳೆದಿರ್ಪ ಹೆಂಗಳಯ್ಯ
ಎನ್ನ ಕಾಲುಗಳೆರಡು
ನಿನ್ನ ಮಜ್ಜನಗಳಿಗೆ
ಪನ್ನೀರುಗಳ ತರುವ ತೊತ್ತಿರಯ್ಯ ೫

ಎನ್ನ ಪ್ರಾಣವು ಇದುವೆ
ನಿನ್ನ ರತಿಸುಖಗಳಿಗೆ
ಭಿನ್ನವಿಲ್ಲದೆಯಿಪ್ಪ ಸತಿಯು ಬಳಿಕ
ಎನ್ನ ಮನವದು ಬಿಡದೆ
ಎನ್ನ ನಿನ್ನನು ತಂದು
ಚೆನ್ನಾಗಿ ಒಂದುಗೂಡಿಪ ಕೆಳದಿಯು ೬

ಇಂತು ಸರ್ವಾಂಗವನು
ಮುಂತೆನ್ನ ಪ್ರಾಣವನು
ಸಂತತಂ ಲಿಂಗ ತಾ ಕೈಕೊಳುತಿರೆ
ಭ್ರಾಂತಿ ಭ್ರಮೆಯಳಿಯಿತ್ತು
ಚಿಂತೆಯಿನ್ನೇಕಯ್ಯ
ಕಂತುಹರ ಶಿವ ಷಡಕ್ಷರಿಲಿಂಗವೆ ೭

ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿವರಿಯುತ್ತ ಸುರಿವುತ್ತ ಎಂದಿಪ್ಪೆನೋ ! ನೋಟವೇ ಪ್ರಾಣವಾಗಿ ಎಂದಿಪ್ಪೆನೋ ! ಕೂಟವೇ ಪ್ರಾಣವಾಗಿ ಎಂದಿಪ್ಪೆನೋ ! ಎನ್ನ ಅಂಗವಿಕಾರದ ಸಂಗವಳಿದು ಕೂಡಲ ಸಂಗಯ್ಯ ಲಿಂಗ ಲಿಂಗವೆನುತ್ತ. —ಬಸವಣ್ಣನವರು

* * *

## ಶಿವನೊಳಗೆ ಮೋಹವಿರೆ ತಾನೆ ಶಿವನು

ರಾಗ : ಮುಖಾರಿ — ತಾಳ : ಝಂಪೆ

ಶಿವನೊಳಗೆ ವಿಶ್ವಾಸ
ಶಿವನೊಳಗೆ ನಂಬಿಗೆಯು
ಶಿವನೊಳಗೆ ಮೋಹವಿರೆ ತಾನೆ ಶಿವನು ॥ಪ॥

ಕುರಿಯ ಹಿಕ್ಕೆಯ ತಂದು
ಹರನೆಂದು ಭಾವಿಸುತ
ಕುರಿಯ ಹಾಲನು ಕರೆದು ತಂದೆರೆಯುತ
ಇರುತಿರಲು ತಂದೆ ತಾ
ಪರಿತಂದು ಕೆಡಿಸಲು
ಶಿರವರಿವ ವಿಶ್ವಾಸವನು ನೋಡಿರೆ ೧

ಭೂಮಿಯೊಳಗಭಿಮಾನ
ಕಾಮಿನಿಯರಿಂದೆಂದು
ಸೋಮಧರ ಚರರೂಪಿನಿಂದ ಬಂದು
ಕಾಮಿನಿಯ ಬೇಡಿತ್ತ
ಭೂಮೀಶ ಬಲ್ಲಾಳ-
ನಾ ಮಹಾ ವಿಶ್ವಾಸವನು ನೋಡಿರೆ ೨

ಏಕಾಂಕಧರನಿರವು
ಊನವಾಗಲು ಕಂಡು
ಕ್ಷೋಣೀಶ ತನ್ನ ಕರಯುಗವ ಕಡಿದು
ಕ್ಷೋಣಿಯೊಳು ನುತಿವೆತ್ತ
ಜಾಣ ಕರಗಳ ಪಡೆದ
ಬಾಣನೆಂಬನ ನಂಬುಗೆಯ ನೋಡಿರೆ ೩

ಹಾಲು ಪಾಯಸ ತನ್ನ
ನಾಲಿಗೆಗೆ ಸವಿಸವಿದು
ಬಾಲೆ ತಾನುಂಬುವದನುಳಿದು ಬಳಿಕ
ಲೀಲೆಯಿಂದಲಿ ತಾನು
ಶೂಲಿಗುಣಿಸಿದಳೊಮ್ಮೆ
ಜೋಳಿಯಕ್ಕನ ಮೋಹವನು ನೋಡಿರೆ ೪

ಇಂತಪ್ಪ ವಿಶ್ವಾಸ
ಇಂತಪ್ಪ ನಂಬುಗೆಯು
ಇಂತಪ್ಪ ಮೋಹ ತನಗಿಲ್ಲದನಕ
ಸಂತತದಿ ಲಿಂಗವನು
ಮುಂತೆ ಪೂಜಿಸುತಿರಲು
ಎಂತೊಲಿವನಯ್ಯ ಷಡಕ್ಷರಿಲಿಂಗವು ೫

ನಂಬರು ನೆಚ್ಚರು ಬರಿದೆ ಕರೆವರಯ್ಯ. ನಂಬಿ ಕರೆದಡೆ ಓ ಎನ್ನನೆ ಶಿವನು ? ನಂಬದೆ ನಚ್ಚದೆ ಬರಿದೆ ಕರೆವರ ಕೊಂಬು ಮೆಟ್ಟಿ ಕೂಗೆಂದ ಕೂಡಲ ಸಂಗಮದೇವ.

—ಬಸವಣ್ಣನವರು

* * *

## ವರವ ಬೇಡುವೆನೊಂದು

ರಾಗ : ಮಲಹರಿ — ತಾಳ : ಝಂಪೆ

ಹರನೆ ನಾ ನಿಮ್ಮಲ್ಲಿ
ವರವ ಬೇಡುವೆನೊಂದು
ಶರಣರಿಗೆ ಭೃತ್ಯನಾಗಿರಿಸೆನ್ನನು ॥ಪ॥

ಅವರಲ್ಲಿ ಶಿವನಿಹನು
ಶಿವನಿರ್ದೊಡಲ್ಲಿ ತಾ
ತವೆ ಸಕಲ ಶರಣಗಣ ಮೆರೆದಿಪ್ಪುದು
ಅವರ ಅಂಗಳ ನಿತ್ಯ
ಶಿವಲೋಕವಾಗಿಹುದು
ಅವರ ಘನಕಿನ್ನೇನ ಸರಿಯು ಕಾಣೆ ೧

ಅವರ ಕಿಂಕರನಾಗಿ
ಅವರ ಪಾದವ ತೊಳೆದು
ಅವರ ಪಡಿಗವ ಬೆಳಗಿ ತೊಳೆದು ತಂದು
ಅವರ ಹಾವುಗೆವಿಡಿದು
ಅವರಡಿಗಳನು ಒರೆಸಿ
ಅವರಿಚ್ಛೆಯೊಳಗಿರ್ಪ ವರವ ಶಿವನೆ ೨

ಅವರುಂಡು ಮಿಕ್ಕುದನು
ಅವರುಟ್ಟು ಬಿಟ್ಟುದನು
ಅವರುಗಿದ ತಾಂಬುಲವ ಸವಿದು ನಾನು
ಅವರಂಗಳವ ಗುಡಿಸಿ
ಅವರ ಬಾಗಿಲ ಕಾಯ್ದು
ಅವರ ಕೀಳಿಲಿ ಸೇರಿಕೊಂಡಿರ್ಪುದ ೩

ಅವರ ಎತ್ತಾಗಿ ನಾ-
ನವರ ತೊತ್ತಾಗಿ ನಾ-
ನವರ ಪಶುವಾಗಿ ನಾ ಸುಖದಿರ್ಪುದ
ಅವರ ಬಾಗಿಲೊಳಿರ್ಪ
ತವೆ ಸೊಣಗ ನಾನಾಗಿ
ಅವರ ಚರಣದ ಧೂಳಿ ತೊಡೆದಿರ್ಪುದ ೪

ಶಿವ ನಿಮ್ಮ ಘನದಿಂದ
ಅವರ ಘನವತ್ಯಧಿಕ
ಅವರಂಗಳದ್ವಿತಿಯು ಕೈಲಾಸವು
ಅವರ ನಾ ಭವಭವದಿ
ತವೆ ಬಿಡದೆ ಇರ್ಪುದನು
ಶಿವ ಷಡಕ್ಷರಿವರನೆ ಪಾಲಿಸೆನಗೆ ೫

ಮೇಲಾಗಲೊಲ್ಲೆನು ಕೀಳಾಗಲೊಲ್ಲದೆ. ಕೀಳಿಂಗಲ್ಲದ ಹಯನ ಕರೆವುದೆ ? ಮೇಲಾಗಿ ನರಕದಲೋಲಾಡಲಾರೆನು. ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು ಮಹಾದಾನಿ ಕೂಡಲ ಸಂಗಮದೇವ.

—ಬಸವಣ್ಣನವರು

* * *

## ಎಲ್ಲರಲಿ ಒಂದೊಂದ ಬೇಡಿಕೊಂಬೆ

ರಾಗ : ಮಧುಮಾಧವಿ

ಎಲ್ಲ ಶರಣರ ನೆನೆದು
ಇಲ್ಲಿ ನಾ ನತನಾಗಿ
ಎಲ್ಲರನು ಒಂದೊಂದು ಬೇಡಿಕೊಂಬೆ ||ಪ||

ಭಕ್ತಿಯಿಲ್ಲದ ಧರ್ಮ
ವ್ಯರ್ಥವಾಗುವದೆಂದು
ಭಕ್ತಿತ್ರಯುವ ಕಲಿಸಿ ಮುಕ್ತನೆನಿಸಿ
ಮುಕ್ತಿ ಪದವಿಗೆ ಸಂದ
ಕರ್ತೃ ಬಸವೇಶನತಿ
ಭಕ್ತಿ ಭಿಕ್ಷೆಯ ನೀಡಿ ಸಲಹೆನ್ನನು ೧

ಶಿವನೊಳಗೆ ಪ್ರಾಣವನು
ತವೆ ಬೆರಸಿ ಹೊರಗಳಿದು
ಶಿವಬೆಳಗಿನೊಳು ಪರಮ ತಪವನೈದಿ
ಶಿವನು ತಾನಾಗಿರ್ದ
ಶಿವಸಿದ್ಧರಾಮಯ್ಯ
ಶಿವಯೋಗ ಭಿಕ್ಷೆಯನು ನೀಡು ಎನಗೆ ೨

ಉರ್ವಿಪತಿಯಂ ಬಿಟ್ಟು
ನಿರ್ವಾಣಯುತೆಯಾಗಿ
ಸರ್ವ ಕರಣೇಂದ್ರಿಯಗುಣಗಳಳಿದು
ಪರ್ವತೇಶನ ಬೆರೆದ
ಸರ್ವಸುಖಿ ಮಹದೇವಿ
ನಿರ್ವಾಣ ಭಿಕ್ಷವನು ನೀಡು ಎನಗೆ ೩

ಇಂಬರಿದು ಶಿವನೊಳಗೆ
ಸಂಭ್ರಮದ ನುಡಿಗಲಿತು
ಕುಂಭಿನಿಯ ಜನರೊಳಗೆ ನುಡಿಗಳರಿತು
ಗಂಭೀರನಾಗಿ ಸ್ವ-
ಯಂಭುವಹ ಅಜಗಣ್ಣ
ಗಂಭೀರ ಭಿಕ್ಷವನು ನೀಡು ಎನಗೆ ೪

ನಮ್ಮ ಶರಣರು ಬಹಳ
ಧರ್ಮಿಗಳು ನಿರ್ಮಳರು
ಒಮ್ಮೆಯುಂ ಭಿಕ್ಷವನು ಇಲ್ಲೆನ್ನರು
ನಮ್ಮ ಸಂರಕ್ಷಿಸುವ
ಧರ್ಮ ಭಿಕ್ಷವಸುಂಡು
ನೆಮ್ಮುವೆನು ಶಿವಷಡಕ್ಷರಿ ಲಿಂಗವ ೫

ಭಕ್ತಿಯಿಲ್ಲದ ಬಡವನಾನಯ್ಯಾ, ಕಕ್ಕಯ್ಯನ ಮನೆಯಲ್ಲು ಬೇಡಿದೆ. ದಾಸಯ್ಯನ ಮನೆಯಲ್ಲು ಬೇಡಿದೆ. ಚನ್ನಯ್ಯನ ಮನೆಯಲ್ಲು ಬೇಡಿದೆ. ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವ ನಿಕ್ಕಿದರೆ ಎನ್ನ ಪಾತ್ರೆ ತುಂಬಿತ್ತು ಕೂಡಲ ಸಂಗಮದೇವ.

— ಬಸವಣ್ಣನವರು

* * *

## ಮುಂದೆ ಏನಪ್ಪುದೋ

ರಾಗ : ಕನ್ನಡ — ತಾಳ : ಝಂಪೆ

ತನುವಿನಾ ಗುಣವು ನಿ-
ಮ್ಮನು ನೆನೆಯಲೀಯದಲೆ
ಘನಮಹಿಮನೇ ಮುಂದೆ ಏನಪ್ಪುದೋ ॥ಪ॥

ಅರಣ್ಯದೊಳಗಿಹೆನೆ
ಧೀರತನವೆನಗಿಲ್ಲ
ಊರೊಳಗಿಹೆನೆ ವಾಗ್ವಿಷಯ ಘನವು
ಮಾರಾರಿ ನೀ ಬೇರೆ
ಸೇರೆ ನಾನೆಂದೊಡಂ
ಯಾರು ನಾ ಮುಂದಕ್ಕೆ ಏನಪ್ಪೆನೋ ೧

ಇರುಳು ನಾ ನೆನೆವೆನೆ
ಇರುಳು ನಿದ್ರೆಯು ಜಡವು
ಇರದೆನಗೆ ಹಗಲು ವ್ಯಾಪಾರ ಹಸಿವು
ತೊರೆಯಲಾರೆನು ಅಶನ
ತರುಬಲಾರೆನು ನಿದ್ರೆ
ಮರಳಿ ನಾ ಮುಂದೆ ಇನ್ನೇನಪ್ಪೆನೋ ೨

ಘನವ ನಾ ನೆನೆವೆನೆ
ಮನ ಹಲವು ನೆನೆವುತಿದೆ
ಮನವ ಹಿಡಿತರುವನಕ ನಿಮಗೆ ಮುನಿಸು
ಮನಭೋಗ ಬಯಸುವದು
ತನು ಸೊಬಗಿಗೆಳಸುವದು
ಘನಮಹಿಮ ನಾ ಮುಂದೆ ಏನಪ್ಪೆನೋ ೩

ಅಂಗವನು ವೇಷದಲಿ
ಶೃಂಗರಿಸಿ ಫಲವೇನು
ಲಿಂಗದಲಿ ಮನ ಪ್ರಾಣ ಬೆರೆಯದನಕ
ಅಂಗಜಾರಿಯೆ ಎನ್ನ
ಸಂಗವನು ನೀನೊಲ್ಲೆ
ಲಿಂಗವೇ ನಾ ಮುಂದೆ ಏನಪ್ಪೆನೋ ೪

ಮನವು ಬೇರೆನ್ನುವನು
ಜಿಮುಗಿ ಕಾಡುತ್ತಲಿದೆ
ನೆನಹಿಂಗೆ ಬಾರದಿರೆ ನೀನೆನ್ನುವ
ಅನವರತ ಕಾಡುವಿಯೊ
ಅನುಪ್ರಾಣಿ ನೀ ಕರುಣ-
ವನು ಮಾಡು ಷಡಕ್ಷರಿ ಲಿಂಗವೆ ೫

ಕಾಯವಿಕಾರ ಕಾಡಿಹುದಯ್ಯ. ಮನವಿಕಾರ ಕೂಡಿಹುದಯ್ಯ. ಇಂದ್ರಿಯ ವಿಕಾರ ಸುಳಿವುದಯ್ಯ. ಸುಳುವಿನೊಳಗೆ ಸುಳುವುತ್ತಲಿದ್ದೇನೆ. ಸಿಲುಕಿಸದಿರಯ್ಯ. ಅನ್ಯಚಿತ್ತವಿರಿಸದಿರಯ್ಯ. ನಿಮ್ಮ ಚಿತ್ತವಿರಿಸಯ್ಯ. ಅನುಪಮ ಸುಖಸಾರಾಯ ಶರಣರಲ್ಲಿ ಕೂಡಲ ಸಂಗಮದೇವಯ್ಯ ಇದನೇ ಬೇಡುವೆನಯ್ಯ. —ಬಸವಣ್ಣನವರು

* * *

## ಮಗಳೆ ಎನ್ನಯ ಮಾತು ಕೇಳು

ರಾಗ : ಆಹರಿ — ತಾಳ : ಝಂಪೆ

ಮಗಳೆ ಎನ್ನಯ ಮಾತು
ಮಿಗೆ ಕೇಳು ನಿನ್ನಾಳ್ದ ಪ
ನ್ನಗರಾಜ ವಿಷವ ತಾಳ್ದನು ಕೊರಳೊಳು ||ಪ||

ಎಲ್ಲರಂತವನಲ್ಲ
ಬಲ್ಲಿದನು ನಿನ್ನ ಮನ-
ದೊಲ್ಲಭನು ಅಂಗವಿದ್ಯೆಗಳಿಲ್ಲವ
ಸಲ್ಲಿಸುತ್ತೊಳಗೊಳಗೆ
ಮೆಲ್ಲಗೆಡೆಯಾಡುತಿರು
ನಿಲ್ಲದಿರು ಹೊರಗೆ ರಚ್ಚೆಯ ಬಳಸದೆ ೧

ಇನನುದಯ ಕಾಲಕ್ಕೆ
ಮನೆಯ ಕಸವನು ತೆಗೆದು
ಅಣಿಮಾಡು ಕರಣ ತಂಡುಲವ ತಳಿಸು
ಮನೆಯೊಳಗೆ ಕತ್ತಲೆಯ
ಎನಿತನೆಸಗಲು ಬೇಡ
ಮುನಿದಡವ ರಕ್ಕಸನು ನಿನ್ನಾಳ್ದನು ೨

ನೀ ಮುಗ್ಧೆ ನಿನ್ನಾಳ್ದ
ಕಾಮಾರಿ ಆತ್ಮಗಿಳಿ-
ರಾಮನನು ಓದಿಸೌ ಹೊರಗಾಡದೆ
ನಾ ಮುನ್ನಲಂಜುವೆನು
ನೀ ಮಗಳೆ ನಿಜ ಹೇಳು
ಸೋಮಧರ ಕೋಪಿಸಿದಡೆಲ್ಲಡಗುವೆ ೩

ಕಾಲಪಿಡಿವೊಡೆ ಅವಗೆ
ಕಾಲಿಲ್ಲ ಮೇಲ್ವಾಯ್ದು
ಬಾಲೆ ನೀ ಹಿಡಿವಡವಗೊಡಲು ಇಲ್ಲ
ಎಳ್ಳನಿತು ಬೇಸರವ
ತಾಳುವವನಲ್ಲ ಕಟು
ಶೂಲಿ ಮುನಿದಡೆ ತಿಳುಪಲರಿಯೆ ಮಗಳೆ ೪

ಮತಿ ಮಸುಳದಿರು ಮಗಳೆ
ಪತಿ ಕೋಪಿಸುವನು ಪತಿ-
ವ್ರತೆಯರೊಳು ಗೆಳತನವ ಮಾಡು ನೀನು
ಪತಿ ಕಾಮಜಿತ ನೀನು
ಅತಿಕಾಮಿಯಾತನನು
ಸತಿ ಕೇಳು ನೀನಿಂತು ಅಗಲಬೇಡ ೫

ಕಡು ತವಕಿ ನಿನ್ನ ಪತಿ
ಬಿಡು ಬೇಸರಾಡದಿರು
ಒಡಗೂಡು ದಿವರಾತ್ರಿಗಳು ಎನ್ನದೆ
ತಡಮಾಡದಿರು ಮಗಳೆ
ಒಡನೆ ಮುನಿದರೆ ಬಳಿಕ
ಮಡದಿ ನೀನೆಂತವನ ತಿಳುಪಿ ನೆರೆವೆ ೬

ಮನೆಯೊಳಗೆ ಹಚ್ಚಿಯುರಿ
ಯುವ ಷಟುವನೆ ಮಾಡು
ಅನಿತರೊಳಗಾಗಿ ನಿನ್ನಾಳ್ದಗೊಲಿದು
ಮನ ಶುದ್ಧದಲಿ ಮಾಡು
ಘನಭಕ್ತಿ ಬೋನವನು
ಇನಿಯನಿಂಗೆಡೆಮಾಡು ಅದಕೊಲಿವನು ೭

ಮೂರು ಕೋಣೆಗಳೊಳಗೆ
ಮೂರು ಜ್ಯೋತಿಯ ಬೆಳಗು
ಆರೈದು ಮಧ್ಯಕೋಣೆಯ ಮನೆಯೊಳು
ಮಾರಾರಿಯನು ನೀನ
ಪಾರ ಸುಖದೊಳು ಹೊಂದಿ
ನಾರಿ ನೀನಿರು ಇಹವ ಪರವರಿಯದೆ ೮

ಇಂತು ಪತಿಯೊಳಗೊಂದಿ
ಸಂತತಂ ಇರುತಿರಲು
ಕಂತುಹರ ಶಿವ ಷಡಕ್ಷರಿ ಲಿಂಗವು
ಮುಂತೆ ನಿನ್ನವನು ತ-
ನ್ನಂತೆ ಮಾಡುವನೊಲಿದು
ಕಾಂತೆ ನೀನಂಬಿ ನಚ್ಚಿರು ಬಿದಂನೆ

ಮನೆಯ ಗಂಡನ ಮನೆವಾರ್ತೆಯನೇನ ಹೇಳುವೆನವ್ವ ! ಅಂಗವಿದ್ಯೆಯನೊಲ್ಲ. ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ. ಕೈಯ ತೊಳೆದಲ್ಲದೆ ಮುಟ್ಟಲೀಯ. ಕಾಲ ತೊಳೆದಲ್ಲದೆ ಹೊಂದಲೀಯ. ಇಂತೀ ಸರ್ವಾಂಗ ತಲೆದೊಳೆದ ಕಾರಣ ಕೂಡಲಸಂಗಮ ದೇವನೆನ್ನ ಕೂಡಿಕೊಂಡನವ್ವ

—ಬಸವಣ್ಣನವರು

# ನಮಗೆ ಸರಿಯದಾರು

ರಾಗ : ದ್ವಿಜಾವಂತಿ

ಶಿವಶರಣರಾ ಮನೆಯ
ತವೆ ಸೇವೆಯನು ಮಾಡಿ
ಭವವ ಗೆದ್ದೆನು ಎನಗೆ ಸರಿಯದಾರು ||ಪ||

ಬಸವೇಶ್ವರನು ಚನ್ನ-
ಬಸವೇಶ್ವರನು ಕರುಣಿ
ದಸರಯ್ಯ ಮೋಳಿಗೆಯ ಮಾರಯ್ಯನ
ಮಸಣಯ್ಯಗಳ ಮನೆಯ
ಕಸವ ಗುಡಿಸುವ ಮಹಾ
ಹೊಸ ಸೇವಕರು ನಮಗೆ ಸರಿಯದಾರು ೧

ಚನ್ನಯ್ಯನಗ್ಗಣಿಯ
ಹೊನ್ನಯ್ಯ ಗಾಣದಾ
ಕನ್ನಯ್ಯ ಧೂಳಿದೇವರು ಬೇಡರ
ಕಣ್ಣಯ್ಯಗಳ ಮನೆಯ
ಉನ್ನತದ ಸೇವಕರು
ಇನ್ನು ಧರೆಯೊಳು ನಮಗೆ ಸರಿಯದಾರು ೨

ಹರಳಯ್ಯ ಮಧುವಯ್ಯ
ಬಳ್ಳೇಶ ಮಲ್ಲಯ್ಯ
ಗೊಲ್ಲಾಳದೇವ ಹಾವಿನ ಹಾಳಿನ
ಕಲ್ಲಯ್ಯಗಳ ಮನೆಯ
ಹುಲ್ಲು ಸೊಪ್ಪನೆ ತರುವ
ಬಲ್ಲಿದರು ನಮಗಿನ್ನು ಸರಿಯದಾರು ೩

ಬಾವೂರು ಬೊಮ್ಮಯ್ಯ
ದೇವರ ದಾಸಯ್ಯ
ಜಗದೇವ ಮಲ್ಲಯ್ಯ ಬೊಮ್ಮಣ್ಣನ
ಆವಾವ ಜಗದೊಳಗೆ
ಆ ವಂದ್ಯರಾ ಮನೆಯ
ಸೇವಕರು ನಮಗಿಂದು ಸರಿಯದಾರು ೪

ಚಿಕ್ಕಯ್ಯ ಡೋಹರ
ಕಕ್ಕಯ್ಯ ಸೊಡ್ಡಳಾ-
ಯ್ದಕ್ಕಿಯಾ ಮಾರಯ್ಯ ರಾಮಯ್ಯನು
ಚಕ್ಕುಲಿಗೆ ನಾಗಯ್ಯ
ಜಕ್ಕರಿನ ತೊತ್ತಿನಾ-
ಮಕ್ಕಳಪ್ಪೆವು ನಮಗೆ ಸರಿಯದಾರು ೫

ಹಾದರದ ಬೊಮ್ಮಯ್ಯ
ಮಾದರ ಧೂಳಯ್ಯ
ಮೇದಾರ ಕೇತಯ್ಯ ವಹಿಲಯ್ಯನ
ಆದಯ್ಯಗಳ ಮನೆಯ
ಕಾದುಕೊಂಡಿರುವಂಥ
ಆದಿಕರು ನಮಗಿನ್ನು ಸರಿಯದಾರು ೬

ಸಾಮವೇದಿಯ ಸಿದ್ಧ-
ರಾಮಯ್ಯ ಮಯಿದುನ
ರಾಮಯ್ಯ ಏಕಾಂತ ರಾಮಯ್ಯನ
ಭೀಮಯ್ಯಗಳ ಮನೆಯ
ಆ ಮಹಾಸೇವಕರು
ಈ ಮಹಿಯೊಳೆಮಗಿನ್ನು ಸರಿಯದಾರು ೭

ಮೊರಸದ ವೆಮ್ಮಯ್ಯ
ಮೊರಟದಾ ಬಂಕಯ್ಯ
ತಿರುನೀಲಕಂಠಯ್ಯನಣು ಮೂರ್ತಿಯು
ಗುರು ಮಲ್ಲಿಕಾರ್ಜುನರ
ಪರಪಂಡಿತರ ಮನೆಯ
ತುರುಗಾಹಿಗರು ನಮಗೆ ಸರಿಯದಾರು ೮

ಬಂಕಯ್ಯ ಶಿವರಾತ್ರಿ
ಸಂಕಯ್ಯ ಹೆಡೆಹಲ್ಲ
ಬಂಕಯ್ಯ ಮರುಳು ವೇಷದೊಳೊಪ್ಪುವ
ಶಂಕರೇಶ್ವರನವರ
ಕಿಂಕರರ ಕಿಂಕರರ
ಲೆಂಕರಪ್ಪೆವು ನಮಗೆ ಸರಿಯದಾರು ೯

ಕುಂಬಾರ ಗುಂಡಯ್ಯ
ಅಂಬಿಗರ ಚೌಡಯ್ಯ
ಕೆಂಭಾವಿ ಭೋಗಯ್ಯ ಶ್ವಪಚಯ್ಯನ
ಮುಂಬಾಗಿಲನು ಕಾಯ್ವ
ನಂಬಿಗೆಯ ಸೇವಕರು
ಕುಂಭಿನಿಯೊಳೆಮಗಿನ್ನು ಸರಿಯದಾರು ೧೦

ಮಳೆಯರಾಜನು ಚೋಳ
ವಲಘಾಂಡ ನೈನಾರು
ಕಲಿನಾಥನಾ ಚಾರಮ ನಂಬಿಯು
ಕಳಿವೆತ್ತ ಚಂಗಳೆಯ
ಒಳಬಾಗಿಲನು ಕಾಯ್ವ
ಸಲುಗೆವಾಳರು ನಮಗೆ ಸರಿಯದಾರು ೧೧

ಸಿರಿಯಾಳ ಕಲಿಯುರು
ಗುರುಭಕ್ತ ನವನಂದಿ
ಅರಿಯುಮನುವಾಳು ನಮಿತಾಂಡಾರ್ಯರ
ಮೆರೆವಿಂಡದೇವರ
ಚರಣ ರಕ್ಷೆಯ ಪಿಡಿದು
ವರವ ಪಡೆವರು ನಮಗೆ ಸರಿಯದಾರು ೧೨

ಚೋಳಕ್ಕ ದುಗ್ಗಳೆಯು
ನೀಲಲೋಚನೆ ಚೆಲ್ವ
ಸೂಳೆ ನಂಬಿಯು ಕಮಳೆ ಸೋಮವ್ವೆಯು
ಕಾಳು ಜೈನನ ಬಿಟ್ಟ
ಲೋಲ ವೈಜವ್ವೆಯು
ಆಳುಗಳು ನಮಗಿನ್ನು ಸರಿಯದಾರು ೧೩

ಅಕ್ಕ ನಾಗಮ್ಮ ಸ-
ತ್ಯಕ್ಕ ಚಂಗಳೆ ಚೆಲ್ವೆ
ಅಕ್ಕರೆಯ ಮಹಾದೇವಿ ಸುಗ್ಗವ್ವೆಯು
ಚಿಕ್ಕ ಕೊಡಗೂಸಿನವ-
ರಕ್ಕರಿನ ತೊತ್ತಿನ
ಮಕ್ಕಳಪ್ಪೆವು ನಮಗೆ ಸರಿಯದಾರು ೧೪

ಇಂತಪ್ಪವರ ಬಂಟ
ನಿಂತು ಭವದಲಿ ಬಂದ
ಸಂತೆಯೆಂದರೆ ನಿಮಗೆ ಕೊರತೆಯಯ್ಯ
ಮುಂತೆ ನಮ್ಮವನೆಂದು
ಸಂತೋಷದಿಂದಪ್ಪು
ಕಂತುಹರ ಶಿವಷಡಕ್ಷರಿ ಲಿಂಗವೆ ೧೫

ಅಯ್ಯಾ ನಿಮ್ಮ ವಂಶಾವಳಿಯುಲ್ಲೊಬ್ಬ ತೊತ್ತಿನ ಮಗ ಹುಟ್ಟಿದಾತನ ತೊತ್ತಿನ ಮಗ ನಾನಯ್ಯ ! ಬಳಿದೊತ್ತು, ಬಳಗದೊತ್ತು, ವಂಶದೊತ್ತು ನಾನಯ್ಯ. ಕೂಡಲಸಂಗಮದೇವ ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ ಎನ್ನ ತೊತ್ತುತನಕ್ಕೆ ಕೇಡಿಲ್ಲವಯ್ಯ. —ಬಸವಣ್ಣನವರು

* * *

# ಹೆದರಿ ನುಡಿಯಲಮ್ಮೆನು

ರಾಗ : ಸುರುಟಿ — ತಾಳ : ಝಂಪೆ

ಮುದದಿ ಶರಣರುಗಳ ನುಡಿಗೆ
ಇದಿರ ನುಡಿಯ ನುಡಿಯದವರು
ಪದುಳದಿಂದ ನುಡಿದ ಮಾಳ್ಕೆಯಿಂದ ನುಡಿವೆನು ॥ಪ॥

ಕಡಿದ ಕೊನರು ಚಿಗುರಿತೆನಲು
ಕಡಿದ ಕೊನರು ಚಿಗುರಿತೆಂಬೆ
ಮಡಿದ ಮನುಷನೆದ್ದನೆನಲು ಎದ್ದನೆಂಬೆನು
ಕಡಿದ ಶಿರವು ಹತ್ತಿತೆನಲು
ಕಡಿದ ಶಿರವು ಹತ್ತಿತೆಂಬೆ
ಬಿಡದೆ ಬರಡು ಕರೆಯಿತೆನಲು ಕರೆಯಿತೆಂಬೆನು ೧

ಉರಗ ನೇವುಳಾಯಿತೆನಲು
ಉರಗ ನೇವುಳಾಯಿತೆಂಬೆ
ಗರಳ ಮಧುರವಪ್ಪುದೆನಲು ಅಪ್ಪುದೆಂಬೆನು
ಬರೆದ ಚಿತ್ರ ನುಡಿಯಿತೆನಲು
ಬರೆದ ಚಿತ್ರ ನುಡಿಯಿತೆಂಬೆ
ಉರಿದ ವೃಕ್ಷ ಚಿಗುರಿತೆನಲು ಚಿಗುರಿತೆಂಬೆನು ೨

ಇಟ್ಟಿ ಹಣ್ಣು ಮಧುರವೆನಲು
ಇಟ್ಟಿ ಹಣ್ಣು ಮಧುರವೆಂಬೆ
ಸುಟ್ಟ ಬೀಜ ಬೆಳೆಯಿತೆನಲು ಬೆಳೆಯಿತೆಂಬೆನು
ನೆಟ್ಟ ಪ್ರತಿಮೆ ನಡೆಯಿತೆನಲು
ನೆಟ್ಟ ಪ್ರತಿಮೆ ನಡೆಯಿತೆಂಬೆ
ಹೊಟ್ಟೆ ಶಿಶುವು ನುಡಿಯಿತೆನಲು ನುಡಿಯಿತೆಂಬೆನು ೩

ಜಡಜಸಖನ ತಡೆದರೆನಲು
ಜಡಜಸಖನ ತಡೆದರೆಂಬೆ
ಕಡಿದ ಹಸ್ತ ಚಿಗುರಿತೆನಲು ಚಿಗುರಿತೆಂಬೆನು
ಮಡಿಯುದವನು ಮಡಿದನೆನಲು
ಮಡಿಯುದವನು ಮಡಿದನೆಂಬೆ
ಕಡಿದ ಮರವು ನಡೆಯಿತೆನಲು ನಡೆಯಿತೆಂಬೆನು ೪

ಒಡನೆ ದಿಟವ ನುಡಿಯಿತಿರಲಿ
ಬಿಡದೆ ಸಟೆಯು ನುಡಿವುತಿರಲಿ
ಕಡಿಯುಲವರು 'ಅಲ್ಲ ಅಹುದು' ಎನ್ನಲಮ್ಮೆನು
ಮೃಡಷಡಕ್ಷರಾಂಕ ಬಂದು
ಕೆಡಹಿ ನಾಲಿಗೆಯನು ಹಿಡಿದು
ಬಿಡದೆ ಕೀಳ್ವನೆಂದು ಹೆದರಿ ನುಡಿಯುಲಮ್ಮೆನು ೫

ಒಡೆಯರಾಡುವ ಮಾತ ಕಡೆ ಪರ್ಯಂತ ಕೇಳಿ, ಇದಿರುವೋಗಿ ಕಿಂಕರನಾಗಿ ನಡುಗುತ್ತ ಬಿನ್ನಹವ ಮಾಡುವ ಸದ್ಭಕ್ತನ ತೋರಯ್ಯ, ಒಡೆಯರಾಡುವ ಮಾತ ಕಂಡು ಕರೆವಲ್ಲಿ ಕೆಡೆಮೆಟ್ಟಿ ಬಾಯಿ ಘನವೆಂದು ಆಡುವವನ ತೋರದಿರಯ್ಯ. ಅವನ ಸಂಗದಲಿ ಇರಿಸದಿರಯ್ಯ. ಅವನ ಸಹಪಂಕ್ತಿಯಲ್ಲಿ ಕುಳ್ಳಿರಿಸದಿರಯ್ಯ. ಕೂಡಲಸಂಗಮದೇವಯ್ಯ ನಿಮ್ಮ ಬೇಡುವ ದೊಂದೇ ವರವ. —ಬಸವಣ್ಣನವರು

# ೨೦ ವಿಕಸವಾಗಲಿ

ರಾಗ : ವಸಂತ — ತಾಳ : ರೂಪಕ

ಇಂದ್ರಿಯಂಗಳಿಚ್ಛೆಗಳಿಗೆ
ಮುಂದುವರಿದು ಮನವು ಕೆಟ್ಟು
ಇಂದುಧರನ ಕಡೆಗೆ ಮುಖವವಾಗಲೀಯದು ॥ಪ॥

ಪಿಕನ ಚೆಲ್ವ ಗಾನ ಧ್ವನಿಯು
ಶುಕನ ಶಿಶುವಿನಂತೆ ನುಡಿವ
ಸಖಿಯರುಗಳ ನುಡಿಗೆ ಕಿವಿಯು ಕಿವುಡು ಬೀಳಲ್ಕೆ
ಸಕಲ ಶಿವನ ಶಾಸ್ತ್ರಗಳನು
ಪ್ರಕಟವಾಗಿ ಕೇಳಿ ಕೇಳಿ
ಸುಖಿಸುವದಕೆ ಎನ್ನ ಶ್ರೋತ್ರ ವಿಕಸವಾಗಲ್ಕೆ ೧

ಹೊನ್ನಿನಲಗಿನಂತೆ ಹೊಳೆವ
ಕನ್ನೆಯರುಗಳಂಗ ಸೋಂಕ
ಲೆನ್ನ ತನುವು ಕಲ್ಲು ಮರನ ಭಾವವಾಗಲ್ಕೆ
ಚೆನ್ನ ಶಿವನ ಚರಣ ಧೂಳಿ-
ಯನ್ನು ಪೂಸಿ ಹೊರಳುವದಕೆ
ಎನ್ನ ತನುವು ಉಬ್ಬಿ ಕೊಬ್ಬಿ ವಿಕಸವಾಗಲ್ಕೆ ೨

ತೊಳಪಗಣ್ಣ ಕಳಶಕುಚದ
ಎಳೆಯ ಪೆಣ್ಣ ನೋಡುವುದಕೆ
ಹೊಳೆವ ನಯನವೆರಡು ಎನಗೆ ಕುರುಡು ಬೀಳಲ್ಕೆ
ಹೊಳೆಯುಚಂದ್ರಧರನ ಚಲುವ-
ನಲಸದೊಲಿದು ನೋಡುವುದಕೆ
ಕಳೆಗಳಾಗಿಯೆನ್ನ ನಯನ ವಿಕಸವಾಗಲ್ಕೆ ೩

ಅಂಬುಜಾಕ್ಷಿಯರುಗಳಧರ
ಚುಂಬನಕ್ಕೆ ಎನ್ನ ಜಿಹ್ವೆ
ಹಂಬಲಿಸದ ಹಾಗೆ ಸೀಳಿ ಪುಗುಳವೇಳಲ್ಕೆ
ನಂಬಿ ಶಿವನ ಶರಣರುಗಳ
ತಂಬುಲವನು ಸವಿವುದಕ್ಕೆ
ಅಂಬುರುಹದ ತೆರದಿ ಜಿಹ್ವೆ ವಿಕಸವಾಗಲ್ಕೆ ೬

ಅಂಗನೆಯರು ತೊಡೆದು ಸೂಡಿ
ದಂಗಪುಷ್ಪ ವಾಸಿಸುವೊಡೆ
ಹಿಂಗದೆನ್ನ ನಾಸಪುಟಕೆ ನೆಗಡಿಯಾಗಲಿ
ಮಂಗಳಾತ್ಮ ಷಡಕ್ಷರಿಯ
ಲಿಂಗದಂಘ್ರಿಗಿತ್ತ ಕುಸುಮ
ಹಾಂಗೆ ವಾಸಿಸುವರೆ ಘ್ರಾಣ ವಿಕಸವಾಗಲ್ಕೆ ೫

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ. ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ. ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ. ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು ಕೂಡಲ ಸಂಗಮದೇವ. —ಬಸವಣ್ಣನವರು

* * *

# ಭಜತಿಯರರೆ ವಿಷ್ಣುವಾಯು

ರಾಗ : ಆನಂದ ಭೈರವಿ — ತಾಳ : ರೂಪಕ

ಭಜತಿಯರರೆ ವಿಷ್ಣುವಾಯು
ಅಬ್ಜಜಾತ ಚಂದ್ರ ಸೂರ್ಯ
ಮರ್ಝರೆ ಭಾವು ತಾಳ ಭಜತಿ ನಾಟ್ಯಲೀಲನಂ ॥ಪ॥

ಧಿಮಿಕು ಧಿಂಧಿ ಧಿಮಿಕು ಧಿಮ್ಮಿ
ಧಿಮಿಕು ನಂದಿ ಕಾಯರುಗಳ
ಯಮಕ ಚಮಕ ಮೃದಂಗ ಭಜತಿ ನಾಟ್ಯಲೀಲನಂ
ಅಮಲ ವೀಣೆ ಸುಸ್ವರದಲಿ
ಗಮಪ ಧನಿಸ ರಿಸರಿ ಸರಿಸ
ಗಮಪ ಭಜತಿ ತುಂಬುರಾದಿ ನಾಟ್ಯಲೀಲನಂ ೧

ಚರಣಹತಿಗೆ ಧರಣಿ ಜಲವು
ಸರಿಸಮಾನ ಮಟ್ಟವಾಗೆ
ಪರಿಜನವು ಸಹಸ್ರ ಶಿರವದಾಗಿ ಬಿದ್ದಿರೆ
ಕರವ ಬಿದಿರೆ ಶೈಲಮಟ್ಟಿ
ಉರುಳುತಿರಲು ದೆಸೆಗೆ ಕುಸುಮ
ವರುಷದಂತೆಯುರುಳಿ ಭಗಣ ನಷ್ಟವಾದವು ೨

ಸುರರು ಭಾಪು ಧಿರುರೆ ಎನಲು
ಹರಿಸುರೇಂದ್ರ ಜೀಯಮೆನಲು
ಹರಸಿ ಮುನಿಗಳಕ್ಷತೆಗಳ ಸೂಸಿಯಿರುತಿರೆ
ಇರದೆಯೆನ್ನ ಹೃದಯ ಕಮಲ
ಪರಮ ಪೀಠದಲ್ಲಿ ಷಡ-
ಕ್ಷರಿಯ ವರನು ಒಪ್ಪಿ ಸೊಗಸಿ ರಾಜಿಸಿರ್ದನು ೩

ಎನ್ನ ಕಾಯವ ದಂಡಿಗೆಯ ಮಾಡಯ್ಯ. ಎನ್ನ ಶಿರವ ಸೋರೆಯ ಮಾಡಯ್ಯ. ಎನ್ನ ನರವ ತಂತಿಯ ಮಾಡಯ್ಯ. ಎನ್ನ ಬೆರಳ ಕಡ್ಡಿಯ ಮಾಡಯ್ಯ. ಬತ್ತೀಸ ರಾಗವ ಹಾಡಯ್ಯ. ಉರದಲೊತ್ತಿ ಬಾರಿಸು ಕೂಡಲಸಂಗಮದೇವ.

—ಬಸವಣ್ಣನವರು

* * *

# ಮನದ ಬಲುಮೆ ಎಂದಿಗಪ್ಪುದೋ

ರಾಗ : ಮಧ್ಯಮಾವತಿ

ಎಡರು ಕಂಟಕಗಳು ಬಂದು
ತೊಡರಿ ಕಾಡುವಲ್ಲಿ ಶಿವನ
ಬಿಡದೆ ನೆನೆವ ಮನದ ಬಲುಮೆಯೆಂದಿಗಪ್ಪುದೋ ॥ಪ॥

ಹಸಿವು ತೃಷೆಗಳಸ್ಥಿ ತನುವ
ಹೊಸೆದು ಹುಸಿಯ ಮಾಡುತಿರಲು
ಬಿಸಿಲು ಕಾದು ಬೆಂಕಿಹತ್ತಿ ನೆತ್ತಿಯುಡರಲು
ಕುಸಿದು ಕುಗ್ಗಿ ಧರೆಗೆ ಬಿದ್ದು
ಅಸುವನಳಿವ ಸಮಯದಲ್ಲಿ
ಸಸಿನೆ ಬಿಡದೆ ಶಿವನ ನೆನೆವುದೆಂದಿಗಪ್ಪುದೋ ೧

ಶಿರವು ಹರಿದು ತುಂಡುಮಾಗಿ
ಧರೆಗೆ ಉರುಳಿ ಬಿದ್ದ ಬಳಿಕ
ಗುರುವೆ ಹರ ನಮಶ್ಶಿವಾಯ ಎನಲಿ ನಾಲಿಗೆ
ಮರಳಿಯಾಚೆ ಕಡೆಯ ಮುಂಡು
ಹೊರಳಿ ಶಿವನ ಕಡೆಗೆ ಮುಗುಚಿ
ಕರವ ಮುಗಿವ ಮನದ ಬಲುಮೆಯೆಂದಿಗಪ್ಪುದೋ ೨

ಅಡವಿಯೊಳಗೆ ಸೊಕ್ಕಿದಾನೆ
ತೊಡರಿ ಬಂದು ಅಡ್ಡಗಟ್ಟಿ
ಕೆಡಹಿ ಕಾಲಿನಿಂದ ಮೆಟ್ಟಿ ಸುಂಡಿಲಿಂದಲಿ
ಹಿಡಿದು ಸೀಳಿ ಹೋಳನೆರಡ
ತೊಡಹಿ ಬೀಸುತಿರಲು ಶಿವನ
ಬಿಡದೆ ನೆನೆವ ಮನದ ಬಲುಮೆಯೆಂದಿಗಪ್ಪುದೋ ೩

ಓತು ನಿದ್ರೆಗೈಯುತಿರಲು
ಭೀತಿ ಹಿಡಿಸಿ ಸ್ವಪ್ನದಲ್ಲಿ
ಭೂತಬೇತಳಂಗಳೈದಿ ಭೀಷ್ಮರೂಪಿನಿಂ
ಘಾತಿಸುತ್ತಿರಲು ಮನವು
ಯಾತಕಂಜದಂತೆ ಭೂತ-
ನಾಥನಡಿಯ ನೆನೆವ ಬಲುಮೆಯೆಂದಿಗಪ್ಪುದೋ ೪

ಅಡವಿಯಲ್ಲಿ ಬರುವ ಪಥದಿ
ಸುಡುತ ಬಂದು ಕಾಡ ಬೇಗೆ
ಅಡರಿ ತನುವನೆಲ್ಲ ಮುಸುಕಿ ಹೋಹುವಾಗಲು
ಕೆಡೆದು ಉರುಳಿ ತನುವು ಪ್ರಾಣ
ಬಿಡುವ ಸಮಯದಲ್ಲಿ ಶಿವನ
ಬಿಡದೆ ನೆನೆವ ಮನದ ಬಲುಮೆಯೆಂದಿಗಪ್ಪುದೋ ೫

ಜ್ವರಗಳಡಸಿ ತನುವ ಸುಟ್ಟು
ಕರಿಯ ಮುರಿಯ ಮಾಡುತಿರಲು
ಬಿರಿದು ತನುವು ಬಾಹುಭಗದಳಂಗಳಿಂದಲಿ
ಚರಿಸದಂತೆ ಏಳದಂತೆ
ಉರುಳದಂತೆ ಮಾಡುವಾಗ
ಹರನ ನೆನೆವ ಮನದ ಬಲುವೆಯೆಂದಿಗಪ್ಪುದೋ ೬

ನಡೆವ ನುಡಿವ ಕೊಡುವ ಉಂಬ
ಉಡುವ ತೊಡುವ ನಿದ್ರೆ ಪ್ರಾಣ
ಬಿಡುವ ಸಮಯದಲ್ಲಿ ಶಿವನ ನೆನೆವ ಮನವನು
ಮೃಡಷಡಕ್ಷರಾಂಕ ನಿಮ್ಮ
ಬಿಡದೆ ಬೇಡುತಿಹೆನು ನಾನು
ಕೆಡುವ ಸಕಲವಾದ ಪದಗಳನ್ನು ಒಲ್ಲೆನು ೭

ಎನಿಸೆನಿಸೆಂದರೆ ನಾ ಧೃತಿಗೆಡೆನಯ್ಯ. ಎಲುದೋರಿದರೆ, ನರಹರಿದರೆ, ಕರುಳು ಕುಪ್ಪಳಿಸಿದರೆ, ನಾ ಧೃತಿಗೆಡೆನಯ್ಯ. ಶಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ, ನಾಲಿಗೆ ಕೂಡಲಸಂಗ ಶರಣೆನುತಿದ್ದಿತಯ್ಯ.

—ಬಸವಣ್ಣನವರು

* * *

## ಮನವನಿಡಲಿಕಾಗದು

ರಾಗ : ಭೈರವಿ — ತಾಳ : ರೂಕಕ

ತಪವ ವಿದ್ಯೆ ಸಾಸಯೋಗ
ಜಪವ ವ್ರತವ ನಡಿಸಬಹುದು
ಗುಪಿತ ಲಿಂಗದಲ್ಲಿ ಮನವನಿಡಲಿಕಾಗದು ॥ಪ॥

ಶೈಲತಟಗಳಲ್ಲಿ ಪರ್ಣ-
ಶಾಲೆಯನ್ನು ಕಟ್ಟಿ ಕಂದ-
ಮೂಲ ಫಲವ ಸವಿದು ತಪವ ಮಾಡಿ ವಿದ್ಯದ
ಜಾಲವನ್ನು ಕಲಿತು ಇಂದ್ರ-
ಜಾಲಗಳನು ತೋರಬಹುದು
ಮೇಲೆ ಲಿಂಗದಲ್ಲಿ ಮನವನಿಡಲಿಕಾಗದು ೧

ದೂರದೃಷ್ಟಿ ದೂರಶ್ರವಣ
ಮಾರಣಾದಿ ಮಂತ್ರತಂತ್ರ
ಏರಿ ಗಗನದಲ್ಲಿ ಚರಿಸೆ ತನ್ನ ಆಲಿಗೆ
ತೋರುವದನು ಪಡೆಯ ಬಹುದು
ಮಾರಿ ಯಕ್ಷಿಣಿಯರ ರಚಿಸಿ
ಸೇರಿ ಲಿಂಗದಲ್ಲಿ ಮನವನಿಡಲಿಕಾಗದು ೨

ಹುಲಿಯು ಕೂಡ ಸೆಣಸ ಬಹುದು
ಮಲೆತ ಗಜದ ಇದಿರಿನಲ್ಲಿ
ಚಲಿಸದಂತೆ ನಿಂದು ಕಾದ ಬಹುದು ಸಿಂಹದ
ಅಲಗ ಬಹುದು ಮೀಸೆಯನ್ನು
ಉಳಿದ; ಸಾಸವಂತದಿರಲಿ
ಒಲಿದು ಲಿಂಗದಲ್ಲಿ ಮನವನಿಡಲಿಕಾಗದು ೩

ಕುಂಭಕಾದಿ ಯೋಗದಿಂದ
ಕುಂಭಿಣಿಯನು ಸಹಜ ಬಿಟ್ಟು
ಅಂಬರವನು ಏರಬಹುದು ಆದಿಯಿಲ್ಲದೆ
ಸಂಭ್ರಮದಲಿ ನಿತ್ಯಕೋಟಿ
ತುಂಬ ಜಪವ ನಡಿಸಬಹುದು
ನಂಬಿ ಲಿಂಗದಲ್ಲಿ ಮನವನಿಡಲಿಕಾಗದು ೪

ಅನ್ಯವಾಕ್ಯವನ್ಯ ಜಪವ-
ನನ್ಯದೈವಗಳನು ಬಿಟ್ಟು
ಉನ್ನತದಲಿ ನಡಿಸ ಬಹುದು ಸಕಲ ವ್ರತವನು
ಚೆನ್ನ ಷಡಕ್ಷರಾಂಕ ಲಿಂಗ
ತನ್ನ ತಾನೆ ಒಲಿಯದನಕ
ಇನ್ನು ಲಿಂಗದಲ್ಲಿ ಮನವನಿಡಲಿಕಾಗದು ೫

ಏನಾದರೆಯು ಸಾಧಿಸ ಬಹುದು. ಮತ್ತೇನಾದರೆಯು ಸಾಧಿಸ ಬಹುದು. ತಾನಾರೆಂಬುದ ಸಾಧಿಸಲಾಗದು ಕೂಡಲ ಸಂಗಮ ದೇವರ ಕರುಣವುಳ್ಳವಂಗಲ್ಲದೆ.

—ಬಸವಣ್ಣನವರು

* * *

# ಕಿವಿಯನೊಡ್ಡಿ ಕೇಳಲಾಗದು

ರಾಗ : ಧನ್ಯಾಸಿ

ಅಂದಿನವರಿಗಿಂದಿನವರು
ಹೊಂದಿ ಹೋಲಲರಿಯರೆಂಬ
ಕುಂದು ನುಡಿಯ ಕಿವಿಯನೊಡ್ಡಿ ಕೇಳಲಾಗದು ॥ಪ॥

ಕಡಿದ ಶಿರವ ಪಡೆದರವರು
ಮಡಿದ ನರನ ಪಡೆದರವರು
ಜಡಜಸಖನ ತಡೆದರವರು ಇಂದಿನವರುವೆ
ಕಡಿದ ಶಿರವ ಜಡಜಸಖನ
ಪಡೆಯ ತಡೆಯಲಾರರೆಂಬ
ಜಡರ ನುಡಿಯ ಕಿವಿಯನೊಡ್ಡಿ ಕೇಳಬಾರದು ೧

ಸುಟ್ಟ ಬೀಜ ಬೆಳೆದರವರು
ಕೆಟ್ಟ ಕಣ್ಣ ಪಡೆದರವರು
ನೆಟ್ಟ ಕೊರಡ ಚಿಗಿತರವರು ಇಂದಿನವರುವೆ
ಸುಟ್ಟ ಕೆಟ್ಟ ನೆಟ್ಟ ಕೊರಡು
ದೃಷ್ಟವಾಗದಿವರಿಗೆಂಬ
ಭ್ರಷ್ಟನುಡಿಯ ಕಿವಿಯನೊಡ್ಡಿ ಕೇಳಲಾಗದು ೨

ತನುವ ಕೊಟ್ಟರಂದಿನವರು
ಧನವ ಕೊಟ್ಟರಂದಿನವರು
ವನಿತೆಯರನು ಕೊಟ್ಟರಂದು ಇಂದಿನವರುವೆ
ತನುವ ಧನವ ವನಿತೆಯರನು
ಇನಿತನೀಯಲಾರರೆಂಬ
ಬಿನುಗು ನುಡಿಯ ಕಿವಿಯನೊಡ್ಡಿ ಕೇಳಲಾಗದು ೩

ತಲೆಯ ಕೊಟ್ಟರಂದಿನವರು
ಹೊಳೆಯ ತಡೆದರಂದಿನವರು
ಚಲುವ ಮಗಳ ಮುಡಿಯ ಕೊಟ್ಟರಿಂದಿನವರುವೆ
ತಲೆಯ ಹೊಳೆಯ ಮಗಳ ಮುಡಿಯ
ಒಲಿದು ತೋರಿ ಕೊಡರು ಎಂಬ
ಹೊಲೆಯ ನುಡಿಯ ಕಿವಿಯನೊಡ್ಡಿ ಕೇಳಲಾಗದು ೪

ಅಂದಿಗೊಬ್ಬ ಶಿವನು ಮೇಣು
ಇಂದಿಗೊಬ್ಬ ಶಿವನದುಂಟು
ಎಂದು ನುಡಿದ ಪಾತಕರ್ಗೆ ನರಕ ತಪ್ಪದು
ಅಂದಿನವರು ಇಂದಿನವರು
ಎಂದು ನುಡಿಯಬೇಡ ನಿನಗೆ
ತಂದೆ ಷಡಕ್ಷರಿಯ ಲಿಂಗ ಕುಂದದೊಲಿವನು ೫

ಅಂದಿನವರು ಇಂದಿನವರೆಂಬ ಸಂದೇಹಿಗಳಿಗೆ ಸಂದೇಹ ಮುಂದುಗೂಡಿಪ್ಪುದು ನೋಡಾ ! ಅಂದೊಂದು ಪರಿ ಇಂದೊಂದು ಪರಿಯೆ ಗುರು ಲಿಂಗ ಜಂಗಮ ? ಅಂದೊಂದು ಪರಿ ಇಂದೊಂದು ಪರಿಯೆ ಪಾದೋದಕ ಪ್ರಸಾದ ? ಅಂದೊಂದು ಪರಿ ಇಂದೊಂದು ಪರಿಯೆ ಶರಣಲಿಂಗಸಂಬಂಧ ? ಅಂದೊಂದು ಪರಿ ಇಂದೊಂದು ಪರಿಯೆ ಅರಿವು ಆಚರಣೆ ? ಅಂದೊಂದು ಪರಿ ಇಂದೊಂದು ಪರಿಯೆ ಸ್ಥಳ ಕುಳಂಗಳು ? ಅಂದೊಂದು ಪರಿ ಇಂದೊಂದು ಪರಿಯೆ ಸೌರಾಷ್ಟ್ರ ಸೋಮೇಶ್ವರ ಲಿಂಗವು ?

—ಆದಯ್ಯನವರು

* * *

# ನಿಮ್ಮ ನಿಜಪದ

ರಾಗ : ಜಂಝೂಟಿ

ಲೋಕದವರ ಭಕ್ತಿಯುಕ್ತಿ
ಸಾಕು ಸೊಗಸದೆನಗೆ ನಿನಗೆ
ಏಕವಾಹ ಪರಿಯ ಮನವ ಬಯಸುತಿರ್ಪೆನು ||ಪ||

ಎನ್ನ ಒಡೆಯ ಎನ್ನ ದೇವ
ಎನ್ನ ಕರ್ತ ಬಂದನೆಂದು
ಉನ್ನತಾಸನವನು ಇಕ್ಕಿ ಕೈಯ ಮುಗಿವರು
ಹೊನ್ನು ಹೆಣ್ಣು ಹಿಡಿದು ಮೇಲೆ
ಚುನ್ನವಾಡುತಿಹರು ಅವರ
ಭಿನ್ನ ಭಕ್ತಿ ಸಾಕು ಸೊಗಸುದೋರದೆನ್ನೊಳು ೧

ಲೀಲೆಯಿಂದ ಮನೆಗೆ ಕರೆದು
ಹಾಲು ತುಪ್ಪಗಳನು ನೀಡಿ
ವೀಳೆಯವನು ಕೊಡುವ ಭಕ್ತಿಯಿಂದಲಿರ್ಪರು
ಮೇಲೆ ವನಿತೆ ಧನವು ಭೂಮಿ
ಮಾಲೆಯೊಳಗೆ ಸಿಲ್ಕಿ ನಲಿದು
ಲೋಲವಾಡುವವರ ಭಕ್ತಿ ಸಾಕು ಸೊಗಸದು ೨

ಇಚ್ಛೆಯಿಲ್ಲದಿರಲು ಅವರು
ಮೆಚ್ಚಿ ಪೂಜೆ ಮಾಡುತಿಹರು
ನಿಚ್ಚ ನಿಚ್ಚ ಕಂಡು ತಮ್ಮ ದುರ್ಗುಣಂಗಳ
ಬಿಚ್ಚಿ ಎತ್ತಿ ನುಡಿಯೆ ಮೋರೆ
ಕಿಚ್ಚಿನಂತೆ ಮಾಡುತಿಹರು
ಹುಚ್ಚರುಗಳ ಭಕ್ತಿ ಸಾಕು ಎನಗೆ ಸೊಗಸದು ೩

ಒಳ್ಳಿತಾಗಿ ಓದಿ ಹಾಡಿ
ಲಲ್ಲೆನುಡಿಯ ನುಡಿಯಲವರ
ಎಲ್ಲಿ ಗಮಿಸಬೇಡಿ ನೀವು ನಮ್ಮ ಮನೆಯೊಳು
ಇಲ್ಲ ಕ್ಷಮಿಸಿ ಎಂದು ಬಳಿಕ
ಎಳ್ಳಿನನಿತು ವಿಗಡ ತೋರ್ವ
ಹೊಳ್ಳುಗಳು ಅವರ ಭಕ್ತಿ ಸಾಕು ಸೊಗಸದು ೪

ಮರ್ತ್ಯರುಗಳು ಮಾಳ್ಪ ಭಕ್ತಿ
ವ್ಯಕ್ತವಾಗಿ ತೋರದೆನಗೆ
ನಿತ್ಯವಾಗಿ ತೋರುತಿಹುದು ನಿಮ್ಮ ನಿಜಪದ
ನಿತ್ಯ ನಿಮ್ಮ ಚರಣಯುಗವ
ಚಿತ್ತ ಮೆಚ್ಚಿ ಅಗಲದಂತೆ
ಕರ್ತ ಶಿವಷಡಕ್ಷರಾಂಕ ಮಾಡು ಎನ್ನನು ೫

* * *

## ಭೋಗ ಹರಿದು ಹೋಗಲಿ

ರಾಗ : ಸುರುಟಿ — ತಾಳ : ರೂಪಕ

ಧರೆಯ ಸುಖದ ಭೋಗವೆನಗೆ
ಹರಿದು ಹೋಗಲಯ್ಯ ನಿಮ್ಮ
ಚರಣಕಮಲದಲ್ಲಿ ಮನವು ಮಗ್ನವಾಗಲಿ ॥ಪ॥

ಒಡೆದ ಗಡಿಗೆ ಹರಿದ ಜೋಳಿ-
ಗೆಡದ ಕೈಯ್ಯ ಮುರಿದ ಕೋಲು
ಹಿಡಿದು ಊರನೆಲ್ಲ ತಿರಿದು ತಂದು ನೋಡಲು
ಒಡಲಿಗಾಗದಂತೆ ಮಾಡು
ಪೊಡವಿಯೊಳಗೆ ಸುಖವ ಮೆಚ್ಚಿ
ಒಡೆಯ ನಿಮ್ಮ ಮರೆದು ಭವಕೆ ಬೀಳಲಾರೆನು ೧

ಊರನೆಲ್ಲ ತಿರಿದು ಒಡಲ
ಪೂರನುಂಬೆನೆನಲು ಮಧ್ಯ
ದಾರಿಯಲ್ಲಿ ತಿರಿದುದೆಲ್ಲ ಚೆಲ್ಲಿಹೋಗಲಿ
ಮೀರಿಯಾಚೆ ಪುರವ ತಿರಿಯೆ
ಯಾರು ಇಲ್ಲ ಎನಲಿ ಎನಗೆ
ಮಾರಹರನ ನೆನೆವುದಿಂತುಟಲ್ಲದಾಗದು ೨

ಹಳೆಯ ಅರಿವೆ ರಗಟೆಗಳನು
ಬಲಿದು ಗಂಟನಿಕ್ಕಿ ಹೊದೆಯೆ
ಚಳಿಯುದಾಗಲೊಂದು ಕಡೆಗೆ ಸಾಲದಂದದಿ
ಕಳೆಯುತಿರಲು ಅದರೊಳರ್ಧ
ಇಲಿಗಳೆಳೆದು ಒಯ್ಯುತಿರಲಿ
ಒಲಿದು ನಿಮ್ಮ ಚರಣ ನೆನೆವುದಿಂತುಟಾಗದು ೩

ಒಡೆಯರುಗಳ ಮಠಕೆ ಬರಲು
ಜಡಿದು ಜರಿದು ನೂಕಲೆನ್ನ
ಒಡನೆಯೊರ್ವರುಗಳ ಕೀಳಿನಲ್ಲಿ ಸೇರಲು
ಕಡೆಗೆ ಅಟ್ಟಲವರು ಹಾಳು
ಗುಡಿಗೆ ಬರಲು ಸೋರುತಿರಲು
ಒಡೆಯ ನಿಮ್ಮ ನೆನೆವುದಿಂತುಟಲ್ಲದಾಗದು ೪

ಅಂಗಳದೊಳು ನಿಲ್ಲಲಿಕ್ಕೆ
ಹಿಂಗಿದವನು ಕಳ್ಳನೆಂದು
ಹಿಂಗಿ ಹೋಗೊಳಕಡೆಗೆಯೆಂದು ನುಡಿಯಲೆಲ್ಲರು
ಹೀಂಗೆಯಾಗದನಕ ಜನರ
ಸಂಗ ಬಿಡದು ಷಡಕ್ಷರಿಯ
ಲಿಂಗದಂಘ್ರಿ ನೆನೆವುದಿಂತುಟಲ್ಲದಾಗದು ೫

ಆಶೆಯೆಂಬ ಪಾಶದಲ್ಲಿ ಭವಬಂಧನವಾಗಿರ್ದೆನಯ್ಯ ! ಸಕೃತು ನಿಮ್ಮ ನೆನೆಯಲು ಎನಗೆ ತೆರಹಿಲ್ಲವಯ್ಯ ! ಕರುಣಾಕರ ಅಭಯಾಕರ ವರದಾನಿ ಕರುಣಿಸಯ್ಯ ! ಸಂಸಾರಬಂಧನವನು ಮಾಣಿಸಿ ಎನಗೆ ಕೃಪೆ ಮಾಡಿ ನಿಮ್ಮ ಶ್ರೀಪಾದಪದ್ಮದಲ್ಲಿ ಭ್ರಮರನಾಗಿರಿಸು ಭಕ್ತಜನಮನೋವಲ್ಲಭ ಕೂಡಲಸಂಗಮದೇವ.

—ಬಸವಣ್ಣನವರು

* * *

## ಭಕ್ತಹೃದಯವಾಸ

ರಾಗ : ಪೂರ್ವಿ — ತಾಳ : ರೂಪಕ

ಪುಣ್ಯತೀರ್ಥ ಪುಣ್ಯಕ್ಷೇತ್ರ
ಪುಣ್ಯಶೈಲದಲ್ಲಿ ಮೂರು-
ಕಣ್ಣನಿಲ್ಲ ಭಕ್ತರುಗಳ ಹೃದಯವಾಸನು ॥ಪ॥

ತೀರ್ಥಪಕ್ಷಿ ಕೃಷ್ಣವೇಣಿ
ತೀರ್ಥಗಮ್ಯ ತುಂಗಭದ್ರೆ
ತೀರ್ಥಕೋಟಿ ಭಾಗಿರಥಿಯು ಭೀಮರಥಿಗಳು
ತೀರ್ಥಗೋಪ ಯಮುನೆ ಮೊದಲು
ತೀರ್ಥಗಳನು ತಿರುಗುತಿರಲು
ತೀರ್ಥಗಳಲ್ಲಿಲ್ಲ ಭಕ್ತರಲ್ಲಿಯಿಪ್ಪನು ೧

ಕಾಶಿ ನೀಲಕಂಠ ಸುರಾ-
ಮೇಶ ಕಾಂಚಿ ಗೋವುಕರ್ಣ
ಈಶ ನದಿಗಳಿಪ್ಪ ಗುಹೆಯು ಹಿಮದ ಕೇದಾರ
ದೇಶಗಳನು ತಿರುಗಿ ಅವನ
ವಾಸವನ್ನು ಅರಿಯರವರು
ಈಶನಿಹನು ಭಕ್ತರುಗಳ ಹೃದಯವಾಸದಿ ೨

ಅನಿಲನೀಲ ಕಾರ್ತಿಕಾದ್ರಿ
ಘನಸುರತ್ನ ಶ್ರೈಲವಾದಿ
ಇನಿತನೆಲ್ಲ ತಿರುಗುತಿಹರು ಶಿವನನರಸುತೆ
ಇನಿತು ಸಾಧಕರುಗಳೆಲ್ಲ
ಘನಷಡಕ್ಷರಾಂಕನಿರ್ಪ
ಅನುವನರಿಯರವರು ಭಕ್ತರಲ್ಲಿಯೆಂಬುದ ೩

ಕೃತಯುಗದಲ್ಲಿ ಕೇದಾರವೆಂಬ ಮೂಲಸ್ಥಾನ. ತ್ರೇತಾ ಯುಗದಲ್ಲಿ ವಾರಾಣಸಿ ಎಂಬ ಮೂಲಸ್ಥಾನ. ದ್ವಾಪಾರ ಯುಗದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ. ಕಲಿಯುಗ ದಲ್ಲಿ ಪರ್ವತವೆಂಬ ಮೂಲಸ್ಥಾನ. ಇಂತೀ ನಾಲ್ಕು ಮೂಲ ಸ್ಥಾನ. ನಾನಾ ಸ್ಥಾನವ ಮೆಟ್ಟದೆ ಜಂಗಮವೇ ಲಿಂಗವೆಂದು ನಂಬಿದೆ ಕೂಡಲಸಂಗಮದೇವ. —ಬಸವಣ್ಣನವರು

* * *

## ಏನನೋದಿ ಏನು ಫಲ

ರಾಗ : ಕೇದಾರಗೌಳ — ತಾಳ : ರೂಪಕ

ಎನಿಸನೋದಿ ಫಲವದೇನು
ಎನಿಸ ಕೇಳಿ ಫಲವದೇನು
ಮನಸು ತನ್ನ ದುರ್ಗುಣಗಳ ಬಿಡದು ಶಿವ ಶಿವ ॥ಪ॥

ಇಂದುಧರನ ಚರಣದಲ್ಲಿ
ಹೊಂದಿ ಸುಖದೊಳಿರದು ಮನವು
ಕುಂದದನ್ಯ ವಿಷಯದತ್ತ ಹರಿವುದೆಂತೆನೆ
ಒಂದು ಶುನಿಯು ಹಿಡಿದು ತಂದು
ಜಂದಣವನು ಏರಿಸಿರಲು
ಮುಂದೆ ಅಡಗ ಕಂಡು ನೆಗೆದ ಮಾಳ್ಕೆಯಾಯಿತು ೧

ಸೊಗಸಿ ಶಿವನ ಮಂತ್ರವನ್ನು
ನೆಗಳುವದಕೆ ಯೆನ್ನ ಜಿಹ್ವೆ
ಸೊಗಡಿಸುವದು ಕೀಳು ನುಡಿಯೆ ಒಲಿವುದೆಂತೆನೆ
ಹಗಲು ಇರುಳು ತನ್ನ ಬಾಯಿ
ಸಿಗುವುದರಿಯದಂತೆ ನಾಯಿ
ಜಗುಳುವುದಕೆಯಲಸದಂತೆ ಜಿಹ್ವೆಯಲಸದು ೨

ಮಂಗಳಾತ್ಮ ಷಡಕ್ಷರಿಯು
ಲಿಂಗದಡಿಯ ಪೂಜಿಸುವಡೆ
ಕೊಂಗಿ ಮನವು ಸ್ವಸ್ಥಿರವನು ಐದದೆಂತೆನೆ
ಹಿಂಗದೊಲಿದು ಘನಸುಗಂಧ
ಸಂಗಡಿಸುತ ತೊಡೆಯೆ ಹಂದಿ
ಹಾಂಗೆಯಿರದೆ ಗಂಜಕ್ಕೆ ಓಡುವಂದದಿ ೩

ಓದಿದರೇನು ಕೇಳಿದರೇನು ಶಿವಪಥವನರಿಯುದನ್ನಕ್ಕ ? ಓದಿತ್ತು ಕಾಣಿರೋ ಶುಕನು ಶಿವಜ್ಞಾನವರಿಯದನ್ನಕ್ಕ. ಓದಿದ ಫಲವು ಮಾದಾರ ಚನ್ನಯ್ಯಂಗಾಯಿತ್ತು ಕೂಡಲಸಂಗಮ ದೇವ.

—ಬಸವಣ್ಣನವರು

* * *

## ಎನಗೆ ದೊಡ್ಡಿತೆ

ರಾಗ : ಮಂಗಳಕಾರಿ

ಧರೆಯೊಳಾನು ತನುವ ಧರಿಸಿ
ಗಿರಿಯು ಶರಧಿ ಸರಸಿಜಾಂಡ-
ವರಿಯೆ ದೊಡ್ಡಿತಾದವೈಸೆ ಎನಗೆ ದೊಡ್ಡಿತೆ ॥ಪ॥

ಮೊಟ್ಟೆಯನ್ನು ಹೊತ್ತ ನರನು
ತಿಟ್ಟನಿಳಿಯಲಾರದಂತೆ
ಸೃಷ್ಟಿಯೊಳಗೆಯುದಿಸಿ ನಾನು ಕಷ್ಟತನುವನು
ತೊಟ್ಟದೆಸೆಗಳಿಂದ ಧರೆಯು
ಘಟ್ಟ ಬೆಟ್ಟ ಗಿರಿಗಳೆಲ್ಲ
ಶ್ರೇಷ್ಠವಾದವೈಸೆ ಮಳಲಗುಪ್ಪೆಯೆನಗಿವು ೧

ಕೋಳದೊಳಗೆ ಸಿಲುಕಿದವನು
ಕಾಲ ನೆಗಹಿ ನೆಗೆವುದಕ್ಕೆ
ಮೇಲಕ್ಕೈದದಂತೆ ತನುವನಾಂತಕಾರಣ
ಏಳು ವಾರಿಧಿಗಳು ತನಗೆ
ಕಾಲಿನಲ್ಲಿ ಮಳಲೊಳೆಳೆದು
ಕಾಲುವೆಗಳ ಹಾಗೆ ಎನಗೆ ದೊಡ್ಡಿತಪ್ಪುದೆ ೨

ಕೀರ ಪಂಜರದೊಳು ಸಿಲುಕಿ
ಹಾರಲಾರದಂತೆ ಎನಗೆ
ವಾರಿಜೋದ್ಭವಾಂಡವೆಲ್ಲ ದೊಡ್ಡಿತಪ್ಪುದೆ
ಮಾರವೈರಿ ಷಡಕ್ಷರಿಯು
ಮೀರಿ ಎನಗೆ ಮುನಿದು ದೊಡ್ಡ
ಘೋರತನುವ ತೊಡಿಸಿ ತಾನು ಕೊಟ್ಟ ಕಾರಣ ೩

ಅಕಟಕಟ, ಶಿವ ನಿನಗಿನಿತು ಕರುಣವಿಲ್ಲ. ಅಕಟಕಟ, ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕ ದೂರನ ? ಏಕೆ ಹುಟ್ಟಿಸಿದೆ ಕೂಡಲ ಸಂಗಮದೇವ ಕೇಳಯ್ಯ, ಎನಗಾಗಿ ಮತ್ತೊಂದು ತರುಮರಾದಿಗಳಿದ್ದಿಲ್ಲವೆ ?

— ಬಸವಣ್ಣನವರು

* * *

# ನಿಮ್ಮನರಿಯದೆ

ರಾಗ : ವಸಂತ

ಹಲವು ವಿದ್ಯೆ ಹಲವು ಶಾಸ್ತ್ರ
ಹಲವು ಮಂತ್ರಗಳನೆ ಕಲಿತು
ಹಲವು ಭವಕೆ ಬಂದರೈಸೆ ನಿಮ್ಮನರಿಯದೆ ॥ಪ॥

ಸುರಪಧನುಸು ಇಂದ್ರಜಾಲ
ತುರಗಯಾಗ ಯಕ್ಷವೈಸೆ
ಕೊರಳು ಬೆರಳು ಅಗ್ನಿ ಉದರ ಸ್ತಂಭವೆಲ್ಲವ
ಅರಿವುತಿರ್ಪ ಮರುಳೆ ನೀನು
ಗಿರಿಯನಗುಳಿ ಇಲಿಯ ಹಿಡಿದ
ಪರಿಗಳೈಸೆ ಏನು ಸುಖವು ಹೇಳು ಪಾತಕ ೧

ಛಂದ ಗಣಿತ ಧಾತುಕೋಶ
ಮುಂದೆ ಪಂಚಕಾವ್ಯ ಮಾಘ
ವೊಂದು ಉಳಿಯದಂತೆ ಕಲಿಯುತಿರ್ಪೆಯದರಿನಿಂ
ಒಂದು ಕಾಳು ನೆಲ್ಲಿಗಾಗಿ
ಮಂದರಾದ್ರಿಯನಿತ ಜೋಳ
ತಂದು ತೂರುತಿರ್ಪ ನರನ ಮಾಳ್ಕೆ ಪಾತಕ ೨

ಧರೆಯೊಳಖಿಳ ಮಂತ್ರಗಳನು
ಬರೆದು ಕಲಿಯುತಿರ್ಪ ನೀನು
ಹಿರಿಯ ಗುಡಿಯ ಕೆಡಹಿ ಮೊಳೆಯ ಪಡೆದ ಮಾಳ್ಕೆಯಿಂ
ಅರಿದು ಷಡಕ್ಷರಿಯ ವರನ
ಪರಮ ಮಂತ್ರವನ್ನು ಜಪಿಸೆ
ಹರುಷ ನಿಧಿಯ ಪಡೆದ ಮಾಳ್ಕೆ ಕೇಳು ಮಾನವ ೩

ಆಡಿದರೇನು, ಹಾಡಿದರೇನು, ಓದಿದರೇನು, ತ್ರಿವಿಧ ದಾಸೋಹವಿಲ್ಲದನ್ನಕ್ಕ ? ಆಡದೆ ನವಿಲು ? ಹಾಡದೆ ತಂತಿ ? ಓದದೆ ಗಿಣಿ ? ಭಕ್ತಿಯಿಲ್ಲದವರನೊಲ್ಲ ಕೂಡಲ ಸಂಗಮದೇವ.

— ಬಸವಣ್ಣನವರು

* * *

# ಧರೆಯ ಭೋಗವಸ್ಥಿರ

## ಭೋಗ ಷಟ್ಪದಿ

ಧರೆಯ ಭೋಗದಸ್ಥಿರವನು
ಅರಿವ ಹಾಗೆ ಪೇಳ್ವೆ ಕೇಳು
ಅರಿದು ತಿಳಿದು ಮರೆದು ಶಿವನ ಭಜಿಸು ಸಂತತ ॥ಪ॥

ಪುರದೊಳೋರ್ವ ವಿದ್ಯೆಧರನು
ಹಿರಿದು ದಿವಸ ದೊರೆಯ ಕಾದು
ಹೊರಡದಿರಲು ಒಂದು ತಂತ್ರ ನೆನೆದನೆಂತೆನೆ
ಸುರರ ಚರನು ಹೊರಗೆ ಬಂದು
ಪುರದ ಬಾಗಿಲೊಳಗೆ ನಿಂದು
ದೊರೆಯ ಬರಲು ಹೇಳಿರೆಂದು ವನಕೆ ಬಂದನು ೧

ಓಡಿ ಹೋಗಿ ದೊರೆಗೆ ಹೇಳೆ
ನೋಡಿ ಬನ್ನಿರೆನುತ ಕಳುಹೆ
ನೋಡಿ ಬಂದು ಜೀಯ ದಿಟವು ಎನುತ ಹೇಳಲು
ಗಾಡನೆದ್ದು ಗಜದ ಶಿರದಿ
ರೂಢನಾಗಿ ಸೇನೆ ಸಹಿತ
ಓಡಿ ಬರಲು ವನದ ಮಧ್ಯದೊಳಗೆ ಸಂದಣಿ ೨

ಅನಿತರಿಂದ ಮುಂದೆ ಬರಲು
ಕನಕಮಯದ ಬಾಗಿಲಲ್ಲಿ
ಮಿನುಗುತಿರ್ಪ ಮೇಲುಕೋಟೆ ರತ್ನ ಕಲಶವು
ಅನಿತರಿಂದ ಮುಂದೆ ಬರಲು
ಕನಕಪೀಠದಲ್ಲಿ ಇಂದ್ರ-
ನನುಪಮದ ಸುವೋಲಗವನು ನೃಪತಿ ಕಂಡನು ೩

ಆವದಾವ ಕಡೆಗೆ ನೋಡೆ
ತೀವಿದಾನೆ ಕುದುರೆ ಮಂದಿ
ಭಾವಿಸಲ್ಕೆ ಅರಿದು ಕನಕ ರಥಗಳಿರ್ಪವು
ದೇವ ಕನ್ನೆಯರುಗಳಖಿಳ
ತೀವಿಯಿರಲು ಓಲಗದೊಳು
ಭೂಮಿಯಾಣ್ಮ ಕಂಡು ತಲೆಯ ತೂಗುತಿರ್ದನು ೪

ತಳಿತ ಸತ್ತಿಗೆಗಳು ಕೋಟಿ
ಬಳಸಿಯಲ್ಲಿಯೊಪ್ಪುತಿಹವು
ಮಿಳಿತ ಚಾಮರುಗಳು ಕೋಟಿ ಢಾಳಿಸುತ್ತಿರೆ
ಬಳಸಿ ಸುರರು ಯಕ್ಷರುಗಳು
ಕುಳಿತು ಇರಲು ಓಲಗದೊಳು
ಒಳಗೆಯೊಳಗೆ ನೃಪತಿ ಹೆದರಿ ಕೈಯ ಮುಗಿದನು ೫

ಕೈಯ ಮುಗಿದು ಕುಳ್ಳರಿಸುತ
ಜೀಯ ಇದುವೆ ವಿದ್ಯೆಯೆನಲು
ಒಯ್ಯನೆಲ್ಲ ಬಯಲು ಮಾಡಿ ಹೋಗಲಾ ನೃಪಂ
ಮೈಯ ಮರೆದು ಬೆರಗುವಟ್ಟು
ಜೀಯ ಇದುವೆ ಚೋದ್ಯವೆನಲು
ಪೊಗಳೆ ಕಂಡನು ೬

ಸಾಂಗವಾಗಿ ಧರೆಯ ಭೋಗ
ಕಂಗಳಿಂಗೆ ತೋರುತಿಹುದು
ಹಿಂಗಿ ಹೋಹುದನಿತು ಬೇಗ ಇದರ ತೆರನೊಲು
ಮಂಗಳಾತ್ಮ ಷಡಕ್ಷರಿಯ
ಲಿಂಗದಡಿಯ ಭಜಿಸು ನಿನಗೆ
ಅಂಗವಹುದು ನಿತ್ಯ ಪದವು ನಂಬು ಮಾನವ ೭

ಸಂಸಾರವೆಂಬುದೊಂದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯ ಮಂದಿ ಕಂಡೆಯ್ಯ. ಇದನಚ್ಚಿ ಕೆಡಬೇಡ ಸಿರಿ ಎಂಬುದ. ಮರೆಯದೆ ಪೂಜಿಸು ನಮ್ಮ ಕೂಡಲ ಸಂಗಮದೇವನ.

—ಬಸವಣ್ಣನವರು

* * *

## ಎಂದಿಗಪ್ಪುದೋ

ರಾಗ : ಧನ್ಯಾಸಿ — ತಾಳ : ರೂಪಕ

ನಿನ್ನ ರೂಪಿನವರು ಬಂದು
ಎನ್ನ ಬಿಡದೆ ನೊಯಿಸಲವರ
ನಿನ್ನ ಹಾಗೆ ಕಾಂಬ ಭಕ್ತಿ ಎಂದಿಗಪ್ಪುದೋ ॥ಪ॥

ಬಂದಬಳಿಯ ಹೋದಬಳಿಯ
ನಿಂದಬಳಿಯ ನೆರೆದಬಳಿಯ
ಚೆಂದಗೆಡಿಸಿ ನುಡಿಯುತಿರಲು ಚರನದೊರ್ವನು
ಇಂದುಧರನು ಮನವ ನೋಡ
ಲೆಂದು ಬೈದನೆಂದು ನಂಬಿ
ಕುಂದದಿರ್ಪ ಭಕ್ತಿಯೆನಗೆ ಎಂದಿಗಪ್ಪುದೋ ೧

ಇಂದುಧರನ ರೂಪಿನಿಂದ
ಬಂದು ಚರಣರಕ್ಷೆವೆರಸಿ
ನೊಂದಿತೆಂದು ಅಳುಕದೆನ್ನ ಕೆಡಹಿ ತುಳಿದೊಡೆ
ಕುಂದದವರು ಶಿವಸ್ವರೂಪ
ರೆಂದು ಭಾವಿಸುತ್ತ ಮನವು
ಚಂದವಳಿಯದಿರ್ಪ ಭಕ್ತಿಯೆಂದಿಗಪ್ಪುದೋ ೨

ಮಾರಹರನ ರೂಪಿನಿಂದ
ಚೋರರುಗಳು ಬಂದು ಕಟ್ಟಿ
ದಾರಿಯಲ್ಲಿ ಸುಲಿದುಕೊಳಲು ಇರ್ದುದೆಲ್ಲವ
ಮಾರವೈರಿ ತಾನೆ ಬಂದು
ಸೂರೆಗೊಂಡು ಹೋದನೆಂಬ
ಸಾರಮನದ ಭಕ್ತಿಯೆನಗೆ ಎಂದಿಗಪ್ಪುದೋ ೩

ಹರನ ರೂಪಿನಿಂದ ಹಗೆಯು
ತರುಬಿ ಬಂದು ಎನ್ನ ಹಿಡಿದು
ಇರಿದು ಬಿಡದೆ ಕೆಡಹಿ ಕಡಿದು ಕೊಚ್ಚುತಿರ್ದೊಡೆ
ಅರಿದು ಅವರ ಕಂಡ ಬಳಿಕ
ಗುರುಸ್ವರೂಪರೆಂದು ನಂಬಿ
ಅರಿಗಳೆನ್ನದಿರ್ಪ ಭಕ್ತಿಯೆಂದಿಗಪ್ಪುದೋ ೪

ಚರನು ಒರ್ವ ಬಂದು ಎನ್ನ
ಶಿರದಲಿಡಲು ಪಾದವನ್ನು
ವರಷಡಕ್ಷರಾಂಕ ತಾನೆ ಬಂದು ಕರುಣದಿ
ಚರಣಯುಗವನಿಟ್ಟನೆನ್ನ
ಶಿರದ ಮೇಲೆ ಎನುತ ನಂಬಿ
ಹರುಷಗೊಳುವ ಭಕ್ತಿಯೆನಗದೆಂದಿಗಪ್ಪುದೋ ೫

ಸಂಗ ಸಹಿತ ಶರಣರು ಬಂದರೆ ನಂಬುವದೆನ್ನ ಮನವು; ನಚ್ಚುವದೆನ್ನ ಮನವು. ಹಾವು ನೇಣೆಂಬ ಭ್ರಾಂತುಳ್ಳನ್ನಕ್ಕ ನಾನು ಭಕ್ತನೆಂತಪ್ಪೆನು ? ಅಂಗ ಲಿಂಗಸಹಿತವಾಗಿ ಬಂದರೆ ಸಂಗ ನೀನೆಂದು ಮತ್ತೆ ಮನದಲ್ಲಿ ಸಂದೇಹ ಹೊಳೆದರೆ ಬೆಂದೆ ನಲ್ಲಾ ನಾನು ಕೂಡಲಸಂಗಮದೇವ.

—ಬಸವಣ್ಣನವರು

* * *

# ಸಿರಿಯು ಕನಸಿನಂತೆ

ಭೋಗ ಷಟ್ಪದಿ

ಧರೆಯ ಭೋಗವನ್ನು ಮೆಚ್ಚಿ
ಹರನ ಮರೆದು ಕೆಡಲು ಬೇಡ
ಧರೆಯ ಭೋಗ ಕನಸಿನಂತೆ ಕೇಳು ಮಾನವ ॥ಪ॥

ತಿರುಕನೊರ್ವನೂರ ಮುಂದೆ
ಮುರುಕು ಧರ್ಮಶಾಲೆಯಲ್ಲಿ-
ಯೊರಗಿರುತ್ತಲೊಂದು ಕನಸ ಕಂಡನೆಂತೆನೆ
ಪುರದ ರಾಜ ಸತ್ತನವಗೆ
ವರ ಕುಮಾರರಿಲ್ಲದಿರಲು
ಕರಿಯು ಕೈಗೆ ಕುಸುಮಮಾಲೆಯಿತ್ತು ಪುರದೊಳು ೧

ಬಿಡಲು ಯಾರ ಕೊರಳಿನಲ್ಲಿ
ತೊಡರಿಸುವದೊ ಅವರ ಪಟ್ಟ-
ಕೊಡೆಯರನ್ನು ಮಾಳ್ಪೆವೆಂದು ಬಿಡಲು ಅಲ್ಲಿಯೆ
ಒಡನೆ ತನ್ನ ಕೊರಳಿನಲ್ಲಿ
ತೊಡರಿಸಲ್ಕೆ ಕಂಡು ತಿರುಕ
ಪೊಡವಿಯಾಣ್ಮನಾದೆನೆಂದು ಹಿಗ್ಗುತಿರ್ದನು ೨

ಪಟ್ಟ ಕಟ್ಟಿಯುವಗೆ ನೃಪರು
ಕೊಟ್ಟರಖಿಳ ಕನ್ನೆಯರನು
ನೆಟ್ಟನವನು ರಾಜ್ಯವಾಳ್ದ ಕನಸಿನಲ್ಲಿಯೆ
ಹೆಟ್ಟುಗೆಯರ ಕೂಡಿ ರತಿಯು
ಹುಟ್ಟಿ ಸುಖದೊಳಿರುತಲವಗೆ
ಹುಟ್ಟಿ ಹೆಣ್ಣು ಗಂಡು ಮಕ್ಕಳಾದವಾಗಲೆ ೩

ಓಲಗದಲಿ ಇರುತ ತೊಡೆಯ
ಮೇಲೆ ಮಕ್ಕಳಾಡುತಿರಲು
ಲೀಲೆಯಿಂದ ಚಾತುರಂಗ ಬಲವ ನೋಡುತ
ಲೋಲನಾಗಿಯಿರುತ ನೆನೆದ
ಕೇಳು ಮಂತ್ರಿ ಮಕ್ಕಳಿಂಗೆ
ಬಾಲೆಯರನು ನೋಡಿ ಮದುವೆ ಮಾಡಬೇಕೆಲ್ಲೈ ೪

ನೋಡಿ ಬನ್ನಿರೆನಲು ಜೀಯ
ನೋಡಿ ಬಂದೆವೆನಲು ಬೇಗ
ಮಾಡು ಲಗ್ನ ಮಂಟಪದೊಳು ಸಕಲ ಕಾರ್ಯವ
ಗಾಢವಾದ ಸಂಭ್ರಮಗಳ
ಮಾಡುತಿರ್ದ ಮದುವೆಗಳನು
ಕೂಡಿದಖಿಳ ರಾಯರುಗಳು ಮೆಚ್ಚುವಂದದಿ ೫

ಧನದ ಮದವು ರಾಜ್ಯ ಮದವು
ವನಿತೆ ಮದವು ಸುತರ ಮದವು
ಜನಿತವಾಗಿ ಕನಸಿನಲ್ಲಿ ಹಿಗ್ಗುತಿರ್ದನು
ಅನಿತರೊಳಗೆ ನೃಪರ ದಂಡು
ಮನೆಯ ಮುತ್ತಿದಂತೆಯಾಗೆ
ಕನಸು ಕಾಣುತೆದ್ದು ಹೆದರಿ ಕಣ್ಣ ತೆರೆದನು ೬

ಮೆರೆಯುತಿರ್ದ ಭಾಗ್ಯವೆಲ್ಲ
ಹರಿದು ಹೋಯಿತೆಂದು ತಿರುಕ
ಮರಳಿ ನಾಚುತಿರ್ದ ಮರುಳನಂತೆಯಾಗದೆ
ಸಿರಿಯು ಕನಸಿನಂತೆಯೆಂದು
ಅರಿದು ಷಡಕ್ಷರಿಯ ಲಿಂಗ
ಹರುಷದಿಂದ ಭಜಿಸು ನಿತ್ಯ ಸುಖವು ತಪ್ಪದು ೭

* * *

## ಕಾಯಮೋಹವನ್ನು ಮರೆ

ರಾಗ : ಜಂಝೂಟಿ

ಕಾಯ ಮಾಯ ಜಾಯವೆಂದು
ಕಾಯ ಮೋಹವನ್ನು ಮರೆದು
ಮಾಯವೈರಿ ಶಿವನ ನೆನೆವದೆಂದಿಗಪ್ಪುದೋ ॥ಪ॥

ಜಡವು ನಿದ್ರೆ ಆಕಳಿಕೆಯು
ಬಿಡದೆ ಹಸಿವು ತೃಷೆಯು ವ್ಯಸನ
ಒಡನೆ ಇದಕೆ ಸುಖವು ದುಃಖ ತಾಗುತಿರ್ಪುದು
ಒಡಲ ಮೆಚ್ಚಿ ಶಿವನ ಸುಖವ
ಕೆಡಿಸಿಕೊಂಬ ತನುವನಿದನು
ಒಡಕು ಓಡಿನಂತೆ ಕಾಂಬುದೆಂದಿಗಪ್ಪುದೋ ೧

ಹಗಲು ಇರುಳು ಓಗರವನು
ಮಿಗಿಲು ತುಂಬಿ ಸುರಿವುತಿಹುದು
ತೊಗಲಚೀಲ ಶುಕ್ಲದೊರತೆ ಕರುಳುಜಾಳಿಗೆ
ಅಘದ ಬೀಡು ಮುಕುತಿಗೇಡು
ಜಗದಿ ಜನಿಸಿ ಕೆಡುವ ತನುವ
ರಗಟೆಗಿಂತ ಕಡೆಯು ಕಾಂಬುದೆಂದಿಗಪ್ಪುದೊ ೨

ಬಿರಿತ ಕಿವಿಗಳಲ್ಲಿ ಗುಗ್ಗೆ
ಪೊರತೆ ಕಣ್ಣಿನಲ್ಲಿ ಜೋರು
ಬರಿಯ ಶ್ಲೇಷ್ಮವುಗಳು ಬಾಯ ಗೊಣ್ಣೆ ಮೂಗಿನ
ಸುರಿವ ತನುವ ಮೆಚ್ಚಿ ಶಿವನ
ಮರೆದು ಕೆಡುವ ಶರಿರವಿದನು
ಕೆರವಿಗಿಂತ ಕಡೆಯ ಕಾಂಬುದೆಂದಿಗಪ್ಪುದೊ ೩

ಚಳಿಯು ತಾಳಲಾರದೊಮ್ಮೆ
ಝುಳವ ತಾಳಲಾರದೊಮ್ಮೆ
ಬಲಿದು ರಕ್ಷಣೆಯನು ಮಾಡಲೇನ ಕೊಡುವದು
ಗಳಿಸಿ ಪಾಪವನ್ನು ಯಮನ
ಬಳಿಗೆ ಒಯ್ವ ತನುವ ನಾಯ
ಹಳಗಿಗಿಂದ ಕಡೆಯ ಕಾಂಬುದೆಂದಿಗಪ್ಪುದೊ ೪

ಅಂಗವಿರಲಿ ಇರ್ದೊಡೇನು
ಅಂಗದಿಚ್ಛೆಗಾದರೊಲಿದು
ಮಂಗಳಾತ್ಮ ಷಡಕ್ಷರಿಯು ಲಿಂಗ ನೆನೆವನು
ಹಿಂಗದಂತೆ ಹೃದಯದಲ್ಲಿ
ಸಂಗಿಸುತ್ತಲಿರಲು ಭವದ
ಭಂಗವಳಿದು ನಿತ್ಯಪದಕೆ ಕರ್ತನಪ್ಪನು ೫

ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟ ಕೊಟ್ಟು ಸುರಕ್ಷಿತವ ಮಾಡುವ ಭರವ ನೋಡಾ ! ಮಹದಾನಿ ಕೂಡಲಸಂಗಯ್ಯನ ಪೂಜಿಸಿ ಬದುಕೋ ಕಾಯುವ ನಿಶ್ಚಯಿಸದೆ. —ಬಸವಣ್ಣನವರು

* * *

# ಕೋಪವೆನಗೆ ಲೋಪವಾಗದು

ರಾಗ : ಮಂಗಳಕಾರಿ

ಚಂದ್ರಧರನಿಗೊಲಿಯದಿರ್ಪ
ಇಂದ್ರಿಯಗಳ ಜಯಿಸದನಕ
ಸಾಂದ್ರವಾದ ಕೋಪವೆನಗೆ ಲೋಪವಾಗದು ॥ಪ॥

ದುಷ್ಟ ನುಡಿಯ ಬಿಡದೆ ಒಲಿದು
ಮುಟ್ಟಿ ಕೇಳ್ವ ಹಾಗೆ ಶಿವನ
ಶ್ರೇಷ್ಠವಾದ ಶಾಸ್ತ್ರ ಕೇಳದಿರ್ಪ ಕಿವಿಯೊಳು
ಇಟ್ಟು ಮೊಳೆಯ ಕೊಡತಿಯಿಂದ
ತಟ್ಟಿ ಆಚೆ ಈಚೆಗಾಗು-
ವಷ್ಟು ಬಡಿಯದನಕ ಎನ್ನ ಸಿಟ್ಟು ಹೋಗದು ೧

ಮೆಚ್ಚಿ ಶಿವನ ಸೋಂಕಿ ಸೊಕ್ಕಿ
ಹೆಚ್ಚಿ ಪುಳಕವೇರದೊಲಿದು
ನಿಚ್ಚಲನ್ಯ ಸೋಂಕುಗಳಿಗೆ ಎಳೆವ ತ್ವಕ್ಕನು
ಕೊಚ್ಚಿ ಕೊಚ್ಚಿ ಕಡಿದು ಕಡಿದು
ನುಚ್ಚು ನುರಿಯ ಮಾಡದನಕ
ಕೆಚ್ಚುಗೊಂಡ ಕೋಪದುರಿಯು ಕಿಚ್ಚು ಪೋಗದು ೨

ಬಿಡದೆ ಲಿಂಗವನ್ನು ನೋಡ-
ಲೊಡನೆಯಶ್ರುಜಲಗಳುಕ್ಕಿ
ಕಡೆಗೆ ಪರಿಯದನ್ಯರೂಪನೋಳ್ಪ ನಯನಕೆ
ಒಡೆಯ ! ಹೆಟ್ಟಿ ಮಳಲತಂದು
ಕೆಡಹಿ ಹೊಯ್ದು ದಸಿಗಳಲ್ಲಿ
ಜಡಿಯದನಕ ಎನ್ನ ಕೋಪವಡಗಿ ಪೋಗದು ೩

ಶೂಲಧರನ ಹಾಡಿ ಹಾಡಿ
ಲೀಲೆ ಮಿಕ್ಕು ಹೊಗಳದನ್ಯ
ಕಾಳುನುಡಿಯು ಹಗಲು ಇರುಳು ನುಡಿವ ಜಿಹ್ವೆಯು
ಸೀಳಿ ಸೀಳಿ ಹೋಳು ಮಾಡಿ
ಮೇಲೆ ಸುಣ್ಣ ನೀರನೆರೆದು
ಮಾಲೆಗಟ್ಟದನಕ ಮನದ ಜ್ವಾಲೆ ಹೋಗದು ೪

ಲಿಂಗಕೀಯುವಿರುವ ಆರಳ
ಭೃಂಗದಂತೆ ಅರಿವ ಮೂಗ
ಹಾಂಗೆ ಸೀಳದನಕ ಕೋಪ ಹರಿದು ಹೋಗದು
ಮಂಗಳಾತ್ಮ ಷಡಕ್ಷರಿಯು
ಲಿಂಗನಡಿಗೆ ಒಲಿಯುದಿಂದ್ರಿ-
ಯಂಗಗಳಿಯುದನಕ ಸುಖವು ಸಾಂಗವಾಗದು ೫

ಅರ್ಥವಡಗದು. ಕ್ರೋಧ ತೊಲಗದು. ಕ್ರೂರ ಕುಭಾಷೆ ಕುಹಕ ಬಿಡದನ್ನಕ್ಕ ನೀನೆತ್ತಲೊ ಶಿವನೆತ್ತಲೊ ಹೋಗತ್ತ ಮರುಳೇ! ಭವರೋಗವೆಂಬ ತಿಮಿರ ತಿಳಿಯುದನ್ನಕ್ಕ ಕೂಡಲ ಸಂಗಯ್ಯನೆತ್ತ ನೀನೆತ್ತ ಮರುಳೇ !

—ಬಸವಣ್ಣನವರು

* * *

## ಎನಗೆ ಭೋಗ ಭಾಗ್ಯ ಬೇಡ

ರಾಗ : ಸುರುಟಿ — ತಾಳ : ರೂಪಕ

ಎನಗೆ ಭೋಗ ಭಾಗ್ಯ ಬೇಡ
ಎನಗೆ ಜಪವು ತಪವು ಬೇಡ
ಎನಗೆ ನಿಮ್ಮ ತೊತ್ತು ಸೇವೆ ನಿತ್ಯವಾಗಲೈ ॥ಪ॥

ಎನ್ನ ಕಂದಿಸುತ್ತ ಬಹಳ
ಎನ್ನ ಬಾಧಿಸುತ್ತ ಬಿಡದೆ
ಎನ್ನನೊಂದು ನೆವಗಳಿಂದ ಕಾಡಿದವರಿಗೆ
ಎನ್ನ ಕೊಂದಡವರಿಗೆಲ್ಲ
ಎನ್ನ ಪೂಜೆ ಫಲಗಳೆಲ್ಲ
ಉನ್ನತದೊಳಗವರಿಗಾಗಿ ಸುಖದಿ ಬಾಳಲಿ ೧

ಹಿಂದೆಯೆನ್ನ ಬೈದವರಿಗೆ
ಮುಂದೆಯೆನ್ನ ಬೈದವರಿಗೆ
ಕುಂದದೆಲ್ಲ ಜನರ ನಡುವೆ ಬೈದಡವರಿಗೆ
ಇಂದುಧರನ ಕರುಣದಿಂದೆ
ಅಂದಣವನು ಏರುವಂತೆ
ಕುಂದದೊಲಿದು ಅವರಿಗೆಲ್ಲ ಭೋಗವಾಗಲಿ ೨

ಹಿಂಗದೆನ್ನ ನಿಂದಿಸಿದ ಜ-
ನಂಗಳೆಲ್ಲ ಸುಖದೊಳಿರುವ
ಹಾಂಗೆ ಶಿವನು ಅವರಿಗೆಲ್ಲ ಭಾಗ್ಯವೀಯಲಿ
ಮಂಗಳಾತ್ಮ ಷಡಕ್ಷರಿಯ
ಲಿಂಗ ನಿನ್ನ ತೊತ್ತುಸೇವೆ
ಸಾಂಗವಾಗಿಯೆನಗೆ ಬಿಡದೆ ನಿತ್ಯವಾಗಲಿ ೩

ಆಯತ ಸ್ವಾಯತ ಸನ್ನಿಹಿತದನುಭಾವವ ನಾನೆತ್ತ ಬಲ್ಲೆನು ? ಲಿಂಗ ಜಂಗಮಕ್ಕೆ ಮಾಡಿ ನೀಡುವ ಅಚ್ಚ ಶರಣರ ಮನೆಯಲ್ಲಿ ಭೃತ್ಯನಾಗಿರ್ಪೆನಯ್ಯ. ಇದುಕಾರಣ ಕೂಡಲ ಸಂಗನ ಶರಣರಲ್ಲದೆ ಅನ್ಯವನರಿಯನಾಗಿ .

—ಬಸವಣ್ಣನವರು

* * *

# ಡಿಂಭದೊಳಗೆ ಒಂದು ಪ್ರಾಣ

ರಾಗ : ಜಂಗಲ್

ಡಿಂಭದೊಳಗೆ ಒಂದು ಪ್ರಾಣ
ಕಂಭ ಸೂತ್ರ ಬೊಂಬೆಯಂತೆ
ಎಂದಿಗಾದರೊಂದು ದಿನವು ಸಾವು ತಪ್ಪದು ॥ಪ॥

ಹುಟ್ಟುತೇನು ತರಲು ಇಲ್ಲ
ಹೋಗುತೇನು ಒಯ್ಯಲಿಲ್ಲ
ಸುಟ್ಟ ಸುಣ್ಣದ್ಹರಳಿನಂತೆ ಆಯಿತು ದೇಹ
ಹೊಟ್ಟೆ ಬಹಳ ಕೆಟ್ಟುದೆಂದು
ಎಷ್ಟು ಕಷ್ಟ ಪಟ್ಟೆ ಪ್ರಾಣ
ಬಿಟ್ಟು ಹೋಗುವಾಗ ಒಂದು ಬಟ್ಟೆಯಿಲ್ಲವು ೧

ಹೊನ್ನು ಹೆಣ್ಣು ಮಣ್ಣು ಮೂರು
ತನ್ನೊಳಿದರ್ು ಉಣ್ಣಲಿಲ್ಲ
ಅಣ್ಣ ತಮ್ಮ ತಾಯಿ ತಂದೆ ಬಗೆಯಲಿಲ್ಲವು
ಅನ್ನ ವಸ್ತ್ರ ಭೋಗಿಯಾಗಿ
ತನ್ನ ಸುಖವನರಿಯಲಿಲ್ಲ
ಮಣ್ಣು ಪಾಲದಾದ ಮೇಲೆ ಯಾರಿಗಾಯಿತು ೨

ಹತ್ತು ಎಂಟು ಲಕ್ಷ ಗಳಿಸಿ
ಮತ್ತೆ ಸಾಲದೆಂದು ಪರರ
ಸೊತ್ತಿಗಾಗಿ ಆಶೆ ಮಾಡಿ ನ್ಯಾಯ ಮಾಡುವ
ಬಿತ್ತಿ ಬೆಳೆದು ಉಂಡೆನೆಂಬ
ವ್ಯರ್ಥ ಚಿಂತೆ ಮಾಡಿದಿರೆಲೊ
ಸತ್ತು ಹೋದ ಮೇಲೆ ನಿನ್ನ ಅರ್ಥದಾರಿಗೆ ೩

ಬೆಳ್ಳಿ ಬಂಗಾರಿಟ್ಟುಕೊಂಡು
ಒಳ್ಳೆ ವಸ್ತ್ರ ತೊಟ್ಟುಕೊಂಡು
ಒಳ್ಳೆ ಚಲುವ ಬೊಂಬೆಯಂತೆ ಆಡಿ ಹೋದೆಲೊ
ಹಳ್ಳ ಹರಿದ ಮೇಲೆ ನೀರ
ಗುಳ್ಳಿಯುರುಳಿ ಹೋದ ತೆರದಿ
ಸುಳ್ಳುರೂಪು ಸಂಸ್ಕೃತಿಯನು ನೋಡಿರಕ್ಕಟ ೪

ಸತ್ಯನೆನಿಸಿಕೊಂಡು ಜನರ
ತಥ್ಯ ವಾಕ್ಯದಲ್ಲಿ ನೀನು
ಮುಕ್ತಿಯಾದ ಮೇಲೆ ನಿನಗೆ ಸ್ತೋತ್ರ ಮಾಳ್ಪರು
ನಿತ್ಯ ಷಡಕ್ಷರಿಯ ಲಿಂಗ
ತೊತ್ತು ಆಗಿ ಭಜಿಸು ನಿನಗೆ
ಉತ್ತಮತ್ತ್ವ ಪದವಿ ದೊರಕಿ ಸುಖಿಪೆ ಸಂತತಂ ೫

ನಾಳೆ ಬಪ್ಪುದು ನಮಗಿಂದೇ ಬರಲಿ. ಇಂದೆ ಬಪ್ಪುದು ನಮಗೀಗಲೇ ಬರಲಿ. ಇದಕಾರಂಜುವರು ? ಇದಕಾರಳಕುವರು ? " ಜಾತಸ್ಯ ಮರಣಂ ಧೃವಂ " ಎಂದುದಾಗಿ ನಮ್ಮ ಕೂಡಲ ಸಂಗಮದೇವ ಬರೆದ ಬರಹ ತಪ್ಪಿಸುವರೆ ಹರಿ ಬ್ರಹ್ಮಾದಿಗಳವಲ್ಲ. —ಬಸವಣ್ಣನವರು

* * *

## ಹಿರಿದು ಕಿರಿದು ಇಲ್ಲ

ರಾಗ : ಮಧ್ಯಮಾವತಿ

ಲಿಂಗದಲ್ಲಿ ಮನವ ಬೆರಸಿ-
ದಂಗೆ ಕಿರಿದು ಹಿರಿದು ಇಲ್ಲ
ಅಂಗ ಗುಣವನಳಿದು ನಿಜವನರಿದ ಕಾರಣ ॥ಪ॥

ಅಂಬಲಿಯದು ಅಮೃತದನ್ನ
ಕಂಬಳಿಗಳು ಕನಕ ದುಪಟಿ
ಅಂಬುಧಿಗಳು ಕಾಲುವೆಗಳು ಸಮವದಾತಗೆ
ನಂಬಿ ಲಿಂಗದಲ್ಲಿ ಮನವು
ತುಂಬಿ ಹೊರಗೆ ಮರೆದನಾಗಿ
ಕುಂಭಿಣಿಯೊಳು ಹಿರಿದು ಕಿರಿದು ತೋರದಾತಗೆ ೧

ಕನಕದುಪ್ಪರಿಗೆಯು ತಿಪ್ಪೆ
ಕನಕಶೈಲ ಹುಲ್ಲುಮರಡಿ
ಮಿನಗುತಿಪ್ಪ ರನ್ನ ಕಲ್ಲು ಸಮವದಾತಗೆ
ಘನಕೆ ಘನವದಾದ ಲಿಂಗ
ಮನವ ನುಂಗಿಕೊಂಡಿತಾಗಿ
ಇನಿತು ಹಿರಿದು ಕಿರಿದು ಕಾಣಬಾರದಾತಗೆ ೨

ಅರಳಮಂಚ ಮುಳ್ಳಹಾಸು
ವರ ಸುಗಂಧ ಪುಡಿಯು ಧೂಳಿ
ಹಿರಿಯ ಕನಕದುಡಿಯುದಾರ ನೂಲು ಸಮವದು
ಪರಕೆ ಪರವದಾದ ಲಿಂಗ
ಶರಧಿಯಲ್ಲಿ ಮುಳುಗಿ ಬಳಿಕ
ಹೊರಗೆ ಮೆರೆದನಾಗಿ ಹಿರಿದು ಕಿರಿದು ತೋರದು ೩

ಹಿರಿಯರಿವರು ಕಿರಿಯರಿವರು
ಅರಿಗಳಿವರು ಮಿತ್ರರಿವರು
ಅರಸರಿವರು ತಿರುಕರಿವರು ಎಂದು ತೋರದು
ಕರಣ ಹರಣವೆಲ್ಲ ಲಿಂಗ-
ಕಿರಣವಾಗಿ ಹೊರಗೆ ಮರೆದು
ಇರುವ ಶರಣ ಹಿರಿದು ಕಿರಿದು ಕಾಣಬಾರದು ೪

ಇದುವೆ ಸುಖವು ಇದುವೆ ದುಃಖ
ವಿದುವೆ ಮೃದುವು ಇದುವೆ ಕಠಿಣ
ವಿದುವೆ ಶೀತವಿದುವೆ ಉಷ್ಣವೆಂದು ತೋರದು
ಮುದದಿ ಷಡಕ್ಷರಿಯ ಲಿಂಗ
ಒದಗಿ ತಾನೆಯಾದನಾಗಿ
ಇದಿರಿನಲ್ಲಿ ಹಿರಿದು ಕಿರಿದು ಕಾಣಬಾರದು ೫

* * *

## ನಾನು ಒಲಿದು ಫಲವದೇನು

ರಾಗ : ಪೂರ್ವಿ

ನಾನು ಒಲಿದು ಫಲವದೇನು
ನೀನು ಒಲಿಯದನಕ ಶಿವನೆ
ಏನು ಮಾಡಿ ಫಲವದೇನು ಬಯಲ ಭ್ರಮೆಯದು ॥ಪ॥

ಜಪವ ಮಾಡಿ ಫಲವದೇನು
ತಪವ ಮಾಡಿ ಫಲವದೇನು
ಅಪರಿಮಿತ ಶಾಸ್ತ್ರ ಪಠಿಸಿ ಫಲವದೇನಲೈ
ತ್ರಿಪುರವೈರಿ ತನ್ನ ತಾನೆ
ಸುಪಥದೋರಿ ಒಲಿಯದನಕ
ಉಪಮೆಯಿಂದ ಮಾಡೆ ತುದಿಗೆ ಕೆಟ್ಟು ಪೋಪುದು ೧

ಹೆಣ್ಣ ಬಿಟ್ಟು ಫಲವದೇನು
ಹೊನ್ನ ಬಿಟ್ಟು ಫಲವದೇನು
ಮಣ್ಣನುಳಿದು ಬಡವನಾಗಿ ಫಲವದೇನಲೈ
ಪನ್ನಗೇಂದ್ರಭರಣನೊಲಿದು
ತನ್ನ ಸುಪಥ ತೋರದನಕ
ಅನ್ಯರುಗಳ ನೋಡಿ ಮಾಡೆ ಕೆಟ್ಟು ಪೋಪುದು ೨

ಗಿರಿಗಳಲ್ಲಿ ಗವಿಗಳಲ್ಲಿ
ತರುಗಳಲ್ಲಿ ಸೇರಿ ತನುವ
ಮರೆದು ಅಸ್ಥಿ ಮಾತ್ರವಿರಲು ಫಲವದೇನದು
ಹರನು ತನ್ನ ತಾನೆ ಒಲಿದು
ಪರಮಸುಖವ ತೋರದನಕ
ಪರರ ನೋಡಿ ಮಾಡೆ ಕಡೆಗೆ ಕೆಟ್ಟು ಪೋಪುದೈ ೩

ಕೋಡುಗಲ್ಲ ತುದಿಯ ಮೇಲೆ
ನೀಡಿ ಕಾಲ ಗಗನಕಾಗಿ
ಕೂಡೆ ಉಗ್ರ ತಪವ ಮಾಡಿ ಫಲವದೇನಲೈ
ರೂಢಿಗೀಶ ಕರುಣ ಹುಟ್ಟಿ
ನೋಡಿ ಒಲಿಯದನಕ ಪರರ
ನೋಡಿ ಮಾಡಲೆಲ್ಲ ಕಡೆಗೆ ಕೆಟ್ಟು ಪೋಪುದು ೪

ಮುನ್ನಮಾಡಿದವರ ಕಂಡು
ಇನ್ನು ನೋಡಿ ಮಾಡಿ ಬಹಳ
ಬನ್ನ ಬಡುತ ಇರಲು ಕಡೆಗೆ ಕೆಟ್ಟು ಪೋಪುದೈ
ತನ್ನ ತಾನೆ ಪಕ್ವವಾಗಿ
ತನ್ನ ತಾನೆ ಪಥಕೆ ಬರಲು
ಚನ್ನ ಷಡಕ್ಷರಿಯ ಲಿಂಗ ತಾನೆ ಒಲಿವನು ೫

ನಾ ನಿಮ್ಮ ನೆನೆವೆನು. ನೀವೆನ್ನರಿಯಿರಿ. ನಾ ನಿಮ್ಮ ನೋಲೈಸುವೆನು. ನೀವೆನ್ನ ಕಾಣೆರಿ. ನಾನೆಂತು ಬದುಕುವೆನೆಂತು ಜೀವಿಸುವೆನಯ್ಯ ? ಕೂಡಲ ಸಂಗಮದೇವ ಎನಗೆ ನೀವೇ ಪ್ರಾಣ ಗತಿ ಮತಿ ನೋಡಯ್ಯ.

—ಬಸವಣ್ಣನವರು

* * *

# ಪನ್ನಗೇಂದ್ರಭರಣ

ರಾಗ : ವಸಂತ — ತಾಳ : ರೂಪಕ

ಪನ್ನಗೇಂದ್ರಭರಣ ಕೇಳು
ನಿನ್ನ ವಿಕಳವಸ್ಥೆಯಲ್ಲಿ
ಎನ್ನ ಪ್ರಾಣ ಬಿಡುವ ಹಾಗೆ ಎಂದಿಗಪ್ಪುದೋ ॥ಪ॥

ಎರಳೆ ಶಿಶುವು ತಾಯ ತಪ್ಪಿ
ಅರಸಿಯರಸಿ ತೊಳಲಿ ಬಳಲಿ
ಇರದೆ ತಾಯ ವಿಕಳದಲ್ಲಿ ಸಾಯುವಂದದಿ
ಹರನ ಮೆಚ್ಚಿ ಮರುಳುಗೊಂಡು
ಇರುಳು ಹಗಲು ನೆನೆದು ನೆನೆದು
ಹರಣ ಬಿಡುವ ಹಾಗೆ ಎನಗೆ ಎಂದಿಗಪ್ಪುದೋ ೧

ದಶದವಸ್ಥೆಯುಳ್ಳ ಕಾಂತೆ
ಒಸೆದು ಪುರುಷ ಬಾರದಿರಲು
ಸಸಿನೆ ಯಮುನ ವಿಕಳತೆಯಲಿ ಸಾವ ತೆರದೊಳು
ಶಶಿಯ ಧರಿಸಿದವಗೆ ಸೋತು
ಹಸಿವನರತು ವಿಕಳತೆಯಲಿ
ಅಸುವ ಬಿಡುವ ಹಾಗೆ ಎನಗೆ ಎಂದಿಗಪ್ಪುದೋ ೨

ಧನವ ಬಹಳ ಗಳಿಸಿದವನು
ತನುವ ಬಿಡುವ ಕಾಲದಲ್ಲಿ
ಧನದ ವಿಕಳತೆಯಲಿ ಪ್ರಾಣ ಬಿಡುವ ತೆರನೊಳು
ಮನಸಿಜಾರಿಯನ್ನು ಮೆಚ್ಚಿ
ನೆನೆದು ನೆನೆದು ವಿಕಳತೆಯಲಿ
ತನುವ ಬಿಡುವ ಹಾಗೆ ನನಗೆ ಎಂದಿಗಪ್ಪುದೋ ೩

ಬಂಧುವರ್ಗವುಳ್ಳ ನರನು
ಸಂದು ಹೋಹ ಕಾಲದಲ್ಲಿ
ಕುಂದಪವರ ವಿಕಳತೆಯಲಿ ಸಾವ ತೆರನೊಳು
ಇಂದುಧರನ ನೆನೆದು ನೆನೆದು
ಕುಂದಿ ಕುಸಿದು ವಿಕಳತೆಯಲಿ
ಹಿಂದೆ ಮರೆದು ತನುವ ಬಿಡುವುದೆಂದಿಗಪ್ಪುದೋ ೪

ಎಲ್ಲಿ ಮೆಚ್ಚು ಎಲ್ಲಿ ಮೋಹ
ಎಲ್ಲಿ ಪ್ರೀತಿ ಎಲ್ಲಿ ಪ್ರೇಮ
ಅಲ್ಲಿ ಅವರ ವಿಕಳತೆಯಲಿ ಸಾವ ತೆರನೊಳು
ಇಲ್ಲಿ ಹಿಂದು ಮುಂದು ಮರೆದು
ಅಲ್ಲಿ ಷಡಕ್ಷರಿಯ ಲಿಂಗ
ದಲ್ಲಿ ಪ್ರಾಣ ಬಿಡುವ ಹಾಗೆ ಎಂದಿಗಪ್ಪುದೋ ೫

ಲಿಂಗವ ಪೂಜಿಸುತ್ತ ಜಂಗಮದ ಮುಖವ ನೋಡುತ್ತಿಪ್ಪ ಸುಖವ ಕೊಡು ಕಂಡೆಯಾ ಲಿಂಗವೇ. ಪರಮ ಸುಖವ ಕೊಡು ಕಂಡೆಯಾ ಲಿಂಗವೇ. ಕೂಡಲ ಸಂಗಮದೇವಯ್ಯ ಇದೇ ವರವ ನಿಮ್ಮಲ್ಲಿ ಬೇಡುವೆ.

—ಬಸವಣ್ಣನವರು

* * *

## ನಿನ್ನ ನೀನೆ ತಿಳಿದು ನೋಡು

ಏಕೆ ಬಯಲು ಭ್ರಾಂತು ನಿನಗೆ
ಸಾಕು ಪರರ ತಿಳುಹದಿರು ವಿ-
ವೇಕಿಯಾಗಿ ನಿನ್ನ ನೀನೆ ತಿಳಿದು ನೋಡೆಲೈ ॥ಪ॥

ತನ್ನ ತಾನೆ ಪಕ್ವವಾದ
ಹಣ್ಣು ತೊಟ್ಟು ಕಳಚಿ ಬಿದ್ದು
ಮುನ್ನಿನಂತೆ ಹೋಗಿ ತೊಟ್ಟು ಹತ್ತ ಬಲ್ಲುದೇ
ಬನ್ನ ಬಡುವ ಜನ್ಮ ತೀರಿ
ತನ್ನ ನಿಜವನರಿದ ಮೇಲೆ
ಮುನ್ನಿನಂತೆ ಲೋಕದವರ ಕೂಡ ಬಲ್ಲನೇ ೧

ಹಸಿಯ ಕಾಯ ಕೊಯ್ದು ತಂದು
ಬಿಸಿಯ ತೋರಿ ಮುಸುಕಿ ಇಡಲು
ನಸಿದು ಕೆಡುವದಲ್ಲದದುವೆ ಪಕ್ವವಪ್ಪುದೇ
ಒಸೆದು ತಂದು ಆತ್ಮನನ್ನು
ಸಸಿನೆ ಇಟ್ಟು ಬೋಧಿಸಿದಡೆ
ಅಸಮಜ್ಞಾನಿಯಾಗಿ ಶರಣರೊಳಗೆ ಬೆರೆವನೇ ೨

ಸತ್ಯ ಜ್ಞಾನ ಮೌನ ತಪವು
ನಿತ್ಯ ಕ್ಷಮೆಯು ದಮೆಯು ಶಾಂತಿ
ಉತ್ತಮತ್ವವಿರಲು ಪಕ್ವವೆಂದು ತಿಳಿವುದು
ಒತ್ತಿ ನೋಡಲವರ ಮನವ
ಮತ್ತೆ ಬೈಯ್ದು ಹೊಯ್ದು ನೋಡೆ
ಚಿತ್ತದಲ್ಲಿ ಸ್ವಸ್ಥವಾಗಿ ಕಲಕದಿರ್ಪುದು ೩

ಹುಸಿಯು ಹುಳುಕು ಡಂಭಕತ್ವ
ಕೊಸರು ಕೋಪ ನೀಚ ಹೃದಯ
ನುಸುಳು ವಿಷಯ ವಿರಲ ಪಕ್ವವೆಂದು ಅರಿವುದು
ಸಸಿನೆ ಅವನ ಕೆಣಕಿ ನೋಡಿ
ಕಿಸುಕುಳತ್ವ ತೋರುತಿಹುದು
ಒಸೆದು ಅವರ ತಿಳಿಯೆ ಸ್ವಸ್ಥ ಶರಣರಪ್ಪರೆ ೪

ಇವರ ಭೇದವಳಿಯದನಕ
ಅಪರ ತಿಳುಹಿ ಫಲವದೇನು
ಭವಕೆ ಹೋಗಲವರು ತನಗೆ ಕೊರತೆಯುಪ್ಪುದೇ
ಭವದ ಕಡೆಯು ಕಂಡ ಬಳಿಕ
ಶಿವನ ನಿಜವು ತಾನೆಯಹುದು
ಶಿವಷಡಕ್ಷರಾಂಕ ನಿಮ್ಮ ಶರಣರಪ್ಪರು ೫

ಪರರ ಚಿಂತೆ ನಮಗೇಕಯ್ಯ ? ನಮ್ಮ ಚಿಂತೆ ನಮಗೆ ಸಾಲದೆ ? ಕೂಡಲ ಸಂಗಮದೇವ ಒಲಿವನೊ ಒಲಿಯನೊ ಎಂಬ ಚಿಂತೆ ಹಾಸಲುಂಟು ಹೊದಿಯಲುಂಟು.

—ಬಸವಣ್ಣನವರು

* * *

## ನಿಮ್ಮ ಹಾಗೆ ಕಾಂಬೆನಯ್ಯ

ದೇವ ನಿಮ್ಮ ರೂಪಿನವರು
ಆವ ಪರಿಯ ನಟಿಸುತಿರಲು
ದೇವ ನಿಮ್ಮ ಹಾಗೆ ಕಾಂಬೆನನ್ಯಗಾಣೆನು ॥ಪ॥

ಚರನದೊರ್ವ ಪರರ ಸತಿಯ
ಕರೆದು ತಂದು ತನ್ನ ಮುಂದೆ
ನೆರೆಯುತಿರಲು ಜರಿದು ಅವರನನ್ಯಭಾವದಿ
ಮರಳಿ ಕಂಡೆನಾದಡೆನ್ನ
ಕೊರೆದು ಮೂಗನಿಟ್ಟಿಗೆಯಲಿ
ಒರಸಿ ಕನ್ನಡಿಯನು ತೋರಿ ನಗಿಸು ಜಗದಲಿ ೧

ಅಳುಕದೊರ್ವ ಚರನು ಕನ್ನ-
ಗಳವು ತಂದು ಎನ್ನ ಮುಂದೆ
ಇಳುಹಿಕೊಂಡು ಇರಲು ಅವರನನ್ಯಭಾವದಿ
ತಿಳಿವೆನಾದೊಡೆನ್ನ ಹಿಡಿದು
ಘುಳಿಲನೆನ್ನ ನಾಲಿಗೆಯನು
ಉಳಿಯದಂತೆ ಕೊರೆದು ಬಿಸುಟಿ ನಗಿಸು ಜಗದೊಳು ೨

ಹರನ ರೂಪು ಧರಿಸಿಯೊರ್ವ
ನೆರೆಯುತಿರಲು ಹೊಲತಿಯುನ್ನು
ಅರಿತು ಅವರನನ್ಯಭಾವದಿಂದ ಕಂಡೊಡೆ
ಹರನೆ ನೀನೆ ಹಿಡಿದು ಎನ್ನ
ಕರಗಿ ಕಾದ ಸೀಸವನ್ನು
ಎರೆದು ಬಾಯೊಳಿರದೆ ಸುಣ್ಣಗದಡು ತುಂಬಿಸು ೩

ಕಳ್ಳರಾಗಲವರು ಬಹಳ
ಸುಳ್ಳರಾಗಲವರು ವಿಷಯ-
ದಲ್ಲಿ ಪ್ರೀತರಾಗಿ ತಿರುಗುತಿರಲಿ ಧರೆಯೊಳು
ಒಳ್ಳಿತಪ್ಪ ಶಿವನ ರೂಪ-
ದಲ್ಲಿ ಇರಲು ಅವರ ನಾನು
ಖುಲ್ಲತನದಿ ಜರಿದೆನಾದೊಡೆನ್ನ ಶಿಕ್ಷಿಸು ೪

ಒಡೆಯ ನಮಗೆ ಏಕೆ ನಾಡ
ಗೊಡವೆ ನಿಮ್ಮ ರೂಪು ಇರಲು
ಒಡೆಯನೆಂದು ನಮಿಸೆ ಶುದ್ಧ ಹಲವದೇತಕೆ
ಮೃಡ ಷಡಕ್ಷರಾಂಕ ನಿಮ್ಮ
ಬೆಡಗು ತಿಳಿಯಲರಿಯೆವಾಗಿ
ಒಡೆಯರುಗಳನಂತುಯಿಂತು ಎನ್ನಬಾರದು ೫

ಲಾಂಛನವ ಕಂಡು ನಂಬುವೆ. ಅವರಂತರಂಗವ ನೀವೇ ಬಲ್ಲಿರಿ. ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ನಮಗೇಕಯ್ಯ ? ರತ್ನ ಮೌಕ್ತಿಕದಚ್ಚು ಕೂಡಲ ಸಂಗಮ ದೇವ ನಿಮ್ಮ ಶರಣರು.

—ಬಸವಣ್ಣನವರು

* * *

## ನನ್ನ ಮೇಲೆ ಹಗೆಯೇಕೆ

ರಾಗ : ಆನಂದ ಭೈರವಿ — ತಾಳ : ರೂಪಕ

ಮುನ್ನ ನಮ್ಮ ಶರಣರುಗಳು
ನಿನ್ನ ಕಾಡಿದುದಕೆ ಈಗ
ಎನ್ನ ಮೇಲೆ ಹಗೆಯ ಮಗುಚುತಿಹೆಯೊ ಕಾಣೆನು ॥ಪ॥

ಶರಣ ನಂಬಿಯಣ್ಣ ಹಿಂದೆ
ತಿರುಗಿಸಿದನು ಹಡಪ ಹಿಡಿಸಿ
ಬೆರೆಸಿ ಕೊಲ್ಲ ಬಂದ ಕಲಿಯ ಕಾಯನೆನುತಲಿ
ಪರಮ ಮೂಗಿದೇವ ತನ್ನ
ಹೊರೆಯ ಹೊರೆಸಲಾಗಿ ತಲೆಯು
ಉರಿದುದಕ್ಕೆ ಎನ್ನ ಕಾಡುತಿಹೆಯೋ ಕಾಣೆನು ೧

ಚೋಳಿಯಕ್ಕ ಉಂಡು ಬಿಟ್ಟ
ಹಾಲ ಹುಗ್ಗಿಯನ್ನು ಮರೆಸಿ
ಹೇಳದಾಕ ತನಗೆ ಕೊಟ್ಟಳೆಂಬ ಸಿಟ್ಟಿಗೆ
ಚೋಳರಾಯ ತನ್ನ ಕೆರೆಗೆ
ಬಾಳವಾಗಿ ಮಣ್ಣ ಹೊರಸಿ
ಆಳುಗೊಳಲು ಎನ್ನ ಕಾಡುತಿಹೆಯೊ ಕಾಣೆನು ೨

ಸತ್ತಿಯಕ್ಕ ಹುಟ್ಟಿನಿಂದ
ಒತ್ತಿ ತನ್ನ ತಿವಿದಳೆಂದು
ಮಿಥ್ಯತನವ ಮಡಗಿಕೊಂಡು ಮತ್ತದಲ್ಲದೆ
ನಿತ್ಯ ಸೌಖ್ಯ ಕೊಂಡ ನಿಮ್ಮ
ನೆತ್ತಿಯನ್ನು ಕುಟ್ಟಿದವರ
ಭೃತ್ಯನಿವನು ಎಂದು ಕಾಡುತಿಹೆಯೊ ಕಾಣೆನು ೩

ಶಂಭು ನೀವು ಉಣ್ಣದಿರಲು
ನಂಬಿಯಕ್ಕ ಕೊಲ್ಲ ಬಂದ-
ಳೆಂಬ ಸಿಟ್ಟು ಮಡಗಿಕೊಂಡು ಮತ್ತದಲ್ಲದೆ
ಕುಂಭಿಣಿಯೊಳು ಬಾಣ ಬೈದ
ನಂಬಿದವನು ನಾನು ಅವರ-
ನೆಂಬ ಸಿಟ್ಟಿನಿಂದ ಕಾಡುತಿಹೆಯೊ ಕಾಣೆನು ೪

ಅಲ್ಲದಿದೊರ್ಡೆನ್ನನೇಕೆ
ಇಲ್ಲಿ ಕಾಡಿದಪಿರಿ ನೀವು
ಎಲ್ಲರಲ್ಲಿ ಕರುಣೆಯೆಂಬರಯ್ಯ ನಿಮ್ಮನು
ಫುಲ್ಲವಿಶಿಖಮಯನಿಗೆನ್ನ-
ನಿಲ್ಲಿ ಕೊಡದೆ ನಿಮ್ಮ ಚರಣ-
ದಲ್ಲಿಯೆನ್ನನಿರಿಸು ಷಡಕ್ಷರಿಯ ಲಿಂಗವೆ ೫

* * *

## ಮನವನಾಳ್ವರಾರ ಕಾಣೆನು

ಹುಲಿಯ ಕರಡಿ ಕರಿಯ ಫಣಿಯ
ಬಲುಹಿನಿಂದಲಾಳ್ವರುಂಟು
ಚಲಿಸದಂತೆ ಮನವನಾಳ್ವರಾರ ಕಾಣೆನು ॥ಪ॥

ಮೊರೆದು ಗರ್ಜಿಸುತ್ತ ಬರುವ
ಹಿರಿಯ ಹುಲಿಯ ಹಿಡಿದು ತಂದು
ಇರದೆ ತಮ್ಮ ಇಚ್ಛೆಯಲ್ಲಿ ಆಳುತಿರ್ಪರು
ಚರಿಸುತಿರ್ಪ ಕಿರಿಯ ಮನವ
ಪರಮ ಲಿಂಗದಲ್ಲಿ ಇರಿಸಿ
ಹರಿಯದಂತೆ ಆಳ್ವ ಹಿರಿಯರುಗಳ ಕಾಣೆನು ೧

ಕರಿಯ ಹಿಡಿದು ನಿಲಿಸಬಹುದು
ಕರಡಿಯನ್ನು ಕಟ್ಟಬಹುದು
ಮೊರೆವ ಫಣಿಯ ಹೆಡೆಯ ಕೈಯೊಳಿರಿಸಬಹುದಲ್ಲೆ
ಕಿರಿಯ ಮನವ ಹಿಡಿದು ತಂದು
ಇರಿಸಿ ಲಿಂಗದಲ್ಲಿ ನೆರೆವ
ಹಿರಿಯರುಗಳ ಕಾಣೆ ಬರಿಯ ಬಲ್ಮೆ ನುಡಿವರು ೨

ಹರಿ ಸುರೇಂದ್ರ ದಿವಿಜರುಗಳ
ಪರಮಯೋಗಿ ಮನು ಮುನಿಗಳ
ಮರವೆಯೆಂಬ ಕೂಪದಲ್ಲಿ ಇಕ್ಕಿ ತುಳಿವುದು
ಹಿರಿಯ ಧ್ಯಾನಿ ಮೌನಿಯೆಂಬ
ಹಿರಿಯರುಗಳನೆಲ್ಲರನ್ನು
ಅರಿವು ಮರವೆಯಲ್ಲಿ ಇಕ್ಕಿ ನುಸುಳಿ ಪೋಪುದು ೩

ಜಪದ ಬಲುಮೆಯಲ್ಲಿ ಇರದು
ತಪದ ಉಗ್ರಕಂಜಿ ನಿಲದು
ಅಪರಿಮಿತದ ಶಾಸ್ತ್ರಪಾಠಕರಿಗೆ ಸಿಲುಕದು
ಚಪಲತನದಿ ಹಿಡಿವೆನೆನಲು
ಉಪರಿಯಾಗಿ ನಿಲುಕದಿಹುದು
ಕುಪಿತ ಮನವ ಹಿಡಿವ ಪರಿಗಳಾವುವೆಂದೊಡೆ ೪

ಮುನ್ನ ತಾನು ಯಾರು ಎಂದು
ತನ್ನ ನಿಜವನರಿದ ಬಳಿಕ
ಚನ್ನ ಷಡಕ್ಷರಿಯ ಲಿಂಗ ತಾನೆಯಾಗಿಹ
ಇನ್ನು ಸರ್ವ ಜಗವದೆಲ್ಲ
ತನ್ನ ನಿಲುವೆಯಾಗಿ ತಾಗಿ
ಅನ್ಯವಿಲ್ಲವಾಗಿ ಮನವು ತಾನೆ ನಿಲುವದು ೫

* * *

# ಏನು ಮಾಡಲಯ್ಯ

ರಾಗ : ಮಧ್ಯಮಾವತಿ — ತಾಳ : ರೂಪಕ

ಏನು ಮಾಡಲಯ್ಯ ಎನ್ನ
ಹೀನ ಮನದ ಬಯಕೆಗಳನು
ಜ್ಞಾನಖಡ್ಗದಿಂದ ಕಡಿವರಾರ ಕಾಣೆನು ॥ಪ॥

ಹಿಡಿವುದದನೆ ಹಿಡಿಯುದಯ್ಯ
ಹಿಡಿಯುದದನೆ ಹಿಡಿವುದಯ್ಯ
ಕೆಡುವ ನಡೆಯ ನಡೆಸಿಯೆನ್ನ ಭವಕೆ ಬರಿಸಿತು
ಬಡವ ನಾನು ಕಾಡುತಿಹುದು
ಹಿಡಿಯುವವರ ನಾನು ಕಾಣೆ
ಕಡಿದು ಕಡಿದು ಹಾಕುವವರನಾರ ಕಾಣೆನು ೧

ನಾನು ನಿಮ್ಮ ನೆನೆವೆನೆನಲು
ತಾನು ನಿಮ್ಮ ನೆನೆಯುದಯ್ಯ
ಶ್ವಾನನಂತೆ ಹಲವು ಕಡೆಗೆ ಹರಿಯುತಿರ್ಪುದು
ಧ್ಯಾನ ಮೌನ ಜಪದೊಳಿರದು
ನಾನು ಇದರ ಸಂಗದಿಂದ
ಜ್ಞಾನಹೀನನಾಗಿ ಹೋದೆನಕ್ಕಟಕ್ಕಟ ೨

ಅಂಗಗುಣದ ನಡೆಗಳೆನಲು
ಹಿಂಗಿಸುತ್ತ ಬರುತಲಿಹುದು
ಲಿಂಗನೆನಹು ಎನಲು ಎಲ್ಲೊ ನುಸುಳಿ ಪೋಪುದು
ಮಂಗಳಾತ್ಮ ಷಡಕ್ಷರಿಯ
ಲಿಂಗ ನಿಮ್ಮ ನೆನೆಯದಿರ್ಪ
ಕೊಂಗು ಮನವ ಶಿಕ್ಷಿಸೆನ್ನ ಆಳಲು ಪೋಗಲಿ ೩

ವಿಕಳನಾದೆನು ಪಂಚೇಂದ್ರಿಯದ ಧಾತುವಿನಿಂದ. ಮತಿಗೆಟ್ಟೆನು ಮನದ ವಿಕಾರದಿಂದ. ಧೃತಿಗೆಟ್ಟೆನು ಕಾಯ ವಿಕಾರದಿಂದ. ಶರಣು ಹೊಕ್ಕೆನು ಕೂಡಲ ಸಂಗಮದೇವಯ್ಯ.

—ಬಸವಣ್ಣನವರು

* * *

## ಕಾಡಲೇಕೆ ನರರುಗಳನು

ರಾಗ : ಪೂರ್ವಿ — ತಾಳ : ರೂಪಕ

ಕಾಡಲೇಕೆ ನರರುಗಳನು
ಬೇಡಿ ಬಳಲಲೇಕೆ ಮನವೆ
ರೂಢಿಗೀಶನೆಮಗೆ ದೈವವಾಗೆ ಇರುತಿರೆ ॥ಪ॥

ಮೃಡನ ಪೂಜೆ ಮಾಡುವುದಕೆ
ಮಡುವಿನಗ್ಗವಣಿಗಳುಂಟು
ಅಡವಿಯಲ್ಲಿ ಕಾಡಪತ್ರಿ ಪುಷ್ಪವುಂಟಲೈ
ಒಡಲಿಗನ್ನ ದುಡಿದರುಂಟು
ಗುಡಿಗಳುಂಟು ಶಯನಕೆನಗೆ
ಒಡೆಯುರುಗಳು ಬಿಸುಟಿದರುವೆ ಶೀತಕುಂಟಲೈ ೧

ಬುದ್ಧಿಯನ್ನು ಹೇಳುವುದಕೆ
ಆದ್ಯರುಗಳ ವಚನವುಂಟು
ಉದ್ಧರಿಸುವಡೆಮಗೆ ಶಿವನ ಮಂತ್ರವುಂಟಲ್ಲೈ
ಅರ್ಧನಾರಿಯೆಂಬ ದೈವ
ಇದ್ದಬಳಿಕ ಕರದೊಳೆಮಗೆ
ಹೊದ್ದಲೇಕೆ ನರರ ಆಶೆ ಮಾಡೆನಕ್ಕಟ ೨

ಮಿಗಿಲು ಮನೆಗಳೇತಕೆನಗೆ
ಅಗಲಲೇಕನುಭಾವಿಗಳನು
ಜಗದೊಳೆಮಗೆ ಹಲವು ಕೋಟಲೆಗಳು ಏತಕ್ಕೈ
ಸೊಗಸು ಷಡಕ್ಷರಿಯಲಿಂಗ
ಅಗಲದೆಮ್ಮ ಕರದೊಳಿರಲು
ಬೆಗಡು ಕೊಳ್ಳಲೇಕೆ ಮನವೆ ನರರ ಮಾಳ್ಕೆಯಿಂ ೩

ಸುರರ ಬೇಡಿದರಿಲ್ಲ. ನರರ ಬೇಡಿದರಿಲ್ಲ. ಬರಿದೆ ಧೃತಿಗೆಡಬೇಡ ಮನವೆ. ಆರನಾದಡೆಯೂ ಬೇಡಿ ಬೇಡಿ ಬರಿದೆ ಧೃತಿಗೆಡಬೇಡ ಮನವೆ. ಕೂಡಲಸಂಗಮದೇವನಲ್ಲದೆ ಆರ ಬೇಡಿದರಿಲ್ಲ ಮನವೆ.

—ಬಸವಣ್ಣನವರ

* * *

## ವಿರತಿ ಸುಲಭವಲ್ಲವಯ್ಯ

ವಿರತಿ ವಿರತಿ ಎಂಬರಯ್ಯ
ವಿರತಿ ಸುಲಭವಲ್ಲವಯ್ಯ
ವಿರತಿ ತನುವಿನಾಶೆಯುಳಿದೊಡಾತ ವಿರತನು ॥ಪ॥

ಅನ್ನವನ್ನು ಉಳಿದ ತನುವ
ಸಣ್ಣೆಸಿರಲು ಬಹುದು ವಸ್ತ್ರ-
ವನ್ನು ಬಿಟ್ಟು ದಿಗಂಬರದೊಳಾಡಬಹುದೆಲ್ಲೈ
ಎಣ್ಣೆನೀರನುಳಿದು ಜಡೆಗ-
ಳನ್ನು ಮಾಡಿ ಕೊಳಲು ಬಹುದು
ತನ್ನ ದೇಹ ಭಾವವಳಿದೊಡಾತ ವಿರತನು ೧

ತನ್ನ ನಿಜವ ತಿಳಿದು ನೋಡಿ
ತನ್ನ ತನುವಿದಲ್ಲ ಕೃತಕ-
ವನ್ನು ಹಿಡಿದು ಆಡಬಾರದೆಂದು ತಿಳಿವುತ
ಅನ್ಯರುಗಳ ಒಡವೆಯಂತೆ
ತನ್ನ ತನುವಿನಲ್ಲಿ ಮೋಹ-
ವನ್ನು ಉಳಿದು ಆಡಬಲ್ಲಡಾತ ವಿರತನು ೨

ಕರಿಯು ಕರಡಿ ವ್ಯಾಘ್ರ ಸಿಂಹ
ಉರಗ ಸಿಡಿಲು ಚೋರರಿಂದ
ಮರಣಭೀತಿ ಇಲ್ಲದಿರ್ದೊಡಾತ ಜಗದೊಳು
ಪರಮ ಷಡಕ್ಷರಿಯ ಲಿಂಗ-
ವರಿದು ಚರಿಸುತಿರ್ಪನಾಗಿ
ನಿರುತ ಲೋಕಭರಿತಚರಿತ ವಿರತನಾತನು ೩

* * *

## ನೀನು ರಕ್ಷಿಸಭವ

ದೇವ ನೀನು ರಕ್ಷಿಸಲ್ಪ-
ಜೀವಿ ನಾನು ಕರುಣಿ ನೀನು
ಸಾವು ಹುಟ್ಟುಗಳಿಗೆ ಬೆದರಿ ಹೆದರುತ್ತೈದೆನೆ ॥ಪ॥

ಎಡಹಿ ಬೀಳ ಒಲ್ಲೆ ನಾನು
ಒಡನೆ ಹೇಳಲರಿಯೆನಯ್ಯ
ನುಡಿಯಬಲ್ಲೆನಯ್ಯ ಮಿಗಿಲು ನಡೆಯಲಾರೆನು
ನುಡಿದ ಹಾಗೆ ನಡೆಯದವರ
ಒಡೆಯ ನೀನು ಒಲ್ಲೆಯವರ
ನಡೆಗಳಿಲ್ಲದಧಮ ನಾನು ರಕ್ಷಿಸೆನ್ನನು ೧

ಭಕ್ತಿಯೆನಗೆ ಇಲ್ಲವಯ್ಯ
ನಿತ್ಯ ಜ್ಞಾನವಿಲ್ಲವೆನಗೆ
ಮತ್ತೆ ವಿರತಿಯೆನಗೆ ಮೊದಲೆ ತಾನೆ ಇಲ್ಲವು
ಕರ್ತೃ ನೀನೆ ಒಲಿದು ನಿಮ್ಮ
ಚಿತ್ತದಲ್ಲಿ ಕರುಣ ಹುಟ್ಟಿ
ಎತ್ತಿ ರಕ್ಷಿಸೆನ್ನನಲ್ಲದಿರಲು ಕೆಡುವೆನು ೨

ನರಶರೀರವೆಂಬ ದೊಡ್ಡ
ಹಿರಿಯ ಕೋಳದೊಳಗೆ ಸಿಕ್ಕಿ
ಕರಗಿ ಕೊರಗಿ ಮರುಗಿ ಅಳಲಿ ಬಳಲುತ್ತೈದೆನೆ
ಮರುಕವೇಕೆ ಇಲ್ಲವಯ್ಯ
ಕರುಣೆಯೆಂಬರಯ್ಯ ನಿಮ್ಮ
ಕೊರತೆ ನಿಮಗೆ ಬಾರದಂತೆ ರಕ್ಷಿಸೆನ್ನನು ೩

ಧೀರನಲ್ಲವಯ್ಯ ನಾನು
ವೀರನಲ್ಲವಯ್ಯ ನಾನು
ಘೋರ ತನುವ ತೊಡಿಸಿ ಎನ್ನನಿಲ್ಲಿ ಬಿಟ್ಟಿರಿ
ಮಾರಹರನೆ ನಿನ್ನನುಳಿದು
ದೂರ ಕೇಳ್ವರಾರು ಎನ್ನ
ಮಾರವೈರಿ ಸಲಹು ಕರುಣಶರಧಿಚಂದ್ರಮ ೪

ಕರುಣಿ ನೀನೆ ಬಲ್ಲೆ ನಾನು
ಹರಗಣೆನಲು ಕರುಣಿಸಿದಿರಿ
ಇರದೆ ಅಹರ ಪ್ರಹರವೆನಲು ಒಡನೆ ಒಲಿದಿರಿ
ಸರಿದ ಕುಸುಮ ಹರನಿಗೆನಲು
ಕರುಣಿಸಿದಿರಿ ಬಿಡದೆ ಎನ್ನ
ಕರುಣಿಸಯ್ಯ ಪರಮ ಷಡಕ್ಷರಿಯ ಲಿಂಗವೆ ೫

* * *

## ಎಂದಿಗಪ್ಪುದೊ

ರಾಗ : ಭೈರವಿ — ತಾಳ : ರೂಪಕ

ಲಿಂಗವಂಗದಲ್ಲಿ ಇರಲು
ಲಿಂಗವೆಂದು ಕಾಂಬ ಮನವ
ಲಿಂಗ ನೀನೆ ಕೊಟ್ಟು ಸಲಹು ಬಯುಕೆಯುನಗಿದು ॥ಪ॥

ಅಂದಣವನ್ನೇರಿ ಭಕುತ-
ಗೊಂದಣದಿಂ ನುತಿಸಿಕೊಳುತ
ಚಂದದಿಂದ ಬರಲು ಆಚೆಯಲ್ಲಿಯೊರ್ವರು
ಕುಂದಿ ಕುಸಿದು ವೃದ್ಧರಾಗಿ
ಚಂದವಳಿದು ಬಳಲುವವರ
ಇಂದುಧರನ ಸಮವು ಕಾಣ್ಬುದೆಂದಿಗಪ್ಪುದೊ ೧

ಯತಿಗಳೆನಿಸಿಕೊಂಡು ಕಾಮ-
ಜಿತರು ಎನಿಸಿಕೊಂಡು ಜ್ಞಾನ-
ಮತಿಗಳೆನಿಸಿಕೊಂಡು ಬರಲು ಆಚೆಯೊರ್ವರು
ಸತಿಯು ಕೂಡಿಕೊಂಡು ಬರುತ
ನುತ ಸುಲಿಂಗ ಕೊರಳೊಳಿರಲು
ಶಿತಿಸುಕಂಠನೆಂದು ಕಾಂಬುದೆಂದಿಗಪ್ಪುದೊ ೨

ವಸ್ತ್ರ ಭೂಷಣವನು ಹೊದೆದು
ಪುಸ್ತಕವನ್ನು ಹಿಡಿದುಕೊಂಡು
ಅರ್ತಿಯಿಂದ ಬರಲು ಆಚೆಯಲ್ಲಿಯೊರ್ವರು
ಹಸ್ತ ಪಾದ ಮುಡುಬರಾಗಿ
ಹಸ್ತದಲ್ಲಿ ಲಿಂಗವಿರಲು
ವಸ್ತುವೆಂಬ ಕಾಂಬ ಮನವು ಎಂದಿಗಪ್ಪುದೊ ೩

ಕಾವಿಯುಂಬರವನು ಹೊದೆದು
ಸಾವಿರಕ್ಷಮಾಲೆ ಕೊರಳ
ತೀವಿ ಧರಿಸಿ ಬರಲು ಆಚೆಯಲ್ಲಿಯೊರ್ವರು
ಸೇವಕತ್ವದಿಂದ ಧನವ
ಕಾವುತಿರಲು ಲಿಂಗವಿರಲು
ದೇವನೆಂದು ಕಾಂಬ ಮನವದೆಂದಿಗಪ್ಪುದೊ ೪

ಸ್ಪಷ್ಟವಾಗಿ ನುಡಿದು ಶಾಸ್ತ್ರ-
ಶ್ರೇಷ್ಠರೆನಿಸಿಕೊಂಡು ಭಕುತಿ-
ನಿಷ್ಠೆವಂತರಾಗಲಾಚೆಯಲ್ಲಿಯೊರ್ವರು
ಕುಷ್ಟರಾಗಿ ಹಸ್ತಪಾದ-
ನಷ್ಟರಾಗಿಯಿರಲು ಅವರು
ಸೃಷ್ಟಿಗೀಶನೆಂದು ಕಾಂಬುದೆಂದಿಗಪ್ಪುದೊ ೫

ಕುರಿಯ ಕಾಯುತಿರಲಿ ಅವರು
ತುರುವ ಕಾಯುತಿರಲಿ ಅವರು
ಕೆರವು ಹೊಲಿಯುತಿರಲಿ ಅವರು ಲಿಂಗವಂಗದಿ
ಧರಿಸಿ ಭಸಿತವಕ್ಷಮಾಲೆ
ಇರಲು ಶಿವನ ಸಮವದೆಂದು
ಅರಿದು ಶರಣು ಮಾಡುತಿರ್ಪುದೆಂದಿಗಪ್ಪುದೊ ೬

ಅಷ್ಟಷಷ್ಟಿ ತೀರ್ಥಗಳನು
ಮೆಟ್ಟಿಬಂದ ಮಹಿಮೆಯನ್ನು
ದೃಷ್ಟಗೊಳಿಸಿ ಮೆರೆಯಲಾಚೆಯಲ್ಲಿಯೊರ್ವರು
ಕಟ್ಟಿಗೆಯನು ಹೊತ್ತುಕೊಂಡು
ಕಷ್ಟ ಪಡುತ ಬರಲು ಅವರ
ಶ್ರೇಷ್ಠರಿವರು ಎಂದು ಕಾಂಬುದೆಂದಿಗಪ್ಪುದೊ ೭

ಮಲಿನ ಕಾಯರಾಗಿ ಬಹಳ
ಮಲಿನ ಕಪಡವನ್ನು ಹೊದೆದು
ಹೊಲೆಯರಂಗಳದಲಿ ಮನೆಯ ಕಟ್ಟಿ ಕೊಂಡಿರೆ
ಚಲುವಲಿಂಗವಂಗದಲ್ಲಿ
ನೆಲಸಿ ಇರಲು ಅವರ ಶಿವನ
ಕುಲವಿದೆಂದು ನಮಿಸುತಿರ್ಪುದೆಂದಿಗಪ್ಪುದೊ ೮

ಕಾಕರಾಗಲವರು ವಿಷಯ
ನೀಕರಾಗಲವರು ಬಹಳ
ಪೋಕರಾಗಲವರ ಅಂಗದಲ್ಲಿ ಲಿಂಗವು
ಸೋಂಕಿ ಸೊಗಸುತಿರಲು ಅವರ-
ನೇಕನಾಥನೆಂದು ಕಾಂಬ
ಏಕಚಿತ್ತವೆನಗೆ ಬಿಡದೆ ಎಂದಿಗಪ್ಪುದೊ ೯

ಹಗೆಗಳಣ್ಣ ತಮ್ಮ ಹಿತವ
ಬಗೆವ ತೊತ್ತು ಮಿತ್ರ ಬಂಟ
ಅಗಲದಿರ್ಪ ಸತಿ ಸುಪುತ್ರ ಮಾತೆ ಪಿತರೊಳು
ಸೊಗಸಿ ಬೆಳಗುತಿರಲು ಲಿಂಗ
ಅಗಲದವರ ಅಂಗದಲ್ಲಿ
ನಗಜೆಪತಿಯ ಸಮವ ಕಾಂಬುದೆಂದಿಗಪ್ಪುದೊ ೧೦

ವೇಶಿಯರನು ಕೂಡಿಕೊಂಡು
ಓಸರಿಸದೆ ಅವರ ಹೆಗಲ
ವಾಸದಲ್ಲಿ ತೋಳನಿಡಿದುಕೊಂಡು ಬರುತಿದೆ
ಈಶ ಲಾಂಛನಗಳು ಇರಲು
ಶ್ರೀ ಷಡಕ್ಷರಾಂಕನೆಂದು
ಓಸರಿಸದೆ ನಮಿಸುತಿರ್ಪುದೆಂದಿಗಪ್ಪುದೊ ೧೧

ಕಳ್ಳ ಬಂದಿಕಾರ ಹಾವಡಿಗ ಹಾದರಿಗ ಬಂಟನೋಲೆಯು ಕಾರನೆಂದನಾದರೆ ನೀ ಮುಂತಾಗಿ ಬಂದ ಭಕ್ತರ ನೀನೆಂದೆಸ್ನ ದಿರ್ದರೆ ಅದೇ ದ್ರೋಹ. ನಡೆ ನುಡಿ ಹುಸಿಯುಂಟಾದರೆ ಕೂಡಲ ಸಂಗನ ತೋರಿದ ಚೆನ್ನಬಸವಣ್ಣನಾಣೆ.

—ಬಸವಣ್ಣನವರು

* * *

# ನಿತ್ಯ ಸುಖಿಯಾಗು



ಭಾಮಿನಿ ಷಟ್ಪದಿಗಳು

ಎಲ್ಲ ವರಗಳ ಕೊಡುವ ದೇವನು
ಇಲ್ಲಿ ಕರಪೀಠದೊಳು ಬಂದಿರೆ
ಖುಲ್ಲ ಮನವೇ ನಿತ್ಯ ಪದವಿಯು ಪಡೆದು ಸುಖಿಯಾಗು ॥ಪ॥

ಸೂಳೆ ನಂಬಿಗೆ ಹೊನ್ನ ಮಳೆಯನು
ಚೋಳರಾಯಗೆ ಕನಕ ವೃಷ್ಟಿಯು
ಹೇಳಲಾಕ್ಷಣ ಕರೆಸಿದಾತನು ಹಸ್ತದೊಳಗಿರಲು
ಖೂಳ ಮನವೇ ನಿತ್ಯ ಪೂಜಿಸಿ
ಕಾಲ ಕಾಮರ ಗೆಲಿದು ಶಿವಗಣ
ಮೇಳದೊಳಗಿರ್ಪ ಪದವಿಯು ಪಡೆದು ಸುಖಿಯಾಗು ೧

ನಂದಿಯುಂಡಿಗೆ ಹೊನ್ನ ಪಡಿಯಂ
ಒಂದನುಳಿಯದೆ ನಂಬಿಯಣ್ಣಗೆ
ತಂದು ಕೊಡುವಾ ದೇವ ನಿನ್ನಯ ಹಸ್ತದೊಳಗಿರಲು
ಬೆಂದ ಮನವೇ ಬೇಡಿಕೊಂಬೆನು
ಕುಂದದಿಳೆಯೊಳು ಭಜಿಸಿ ಸುಖರಸ-
ಸಿಂಧು ತೆರೆಯೊಳಗಾಳುತಿರು ನೀ ನಿತ್ಯ ಸುಖಿಯಾಗು ೨

ಬಾಣ ಮಾಯೂರರಿಗೆ ಇಷ್ಟವ
ನೂನಯಾಗದ ಹಾಂಗೆ ಕೊಟ್ಟಿಹ
ಜಾಣ ಬಂದುರೆ ಒಲಿದು ನಿನ್ನಯ ಹಸ್ತದೊಳಗಿರಲು
ಹೀನ ಮನವೇ ನಿತ್ಯ ಪೂಜಿಸು
ಏನುವನು ಪಡಿಯದಲೆ ಭಕ್ತಿ-
ಜ್ಞಾನ ವೈರಾಗ್ಯವನು ಪಡೆಯುತೆ ನಿತ್ಯ ಸುಖಿಯಾಗು ೩

ಕಾಳಿದಾಸಂಗೊಲಿದ ಮಗಳಿಗೆ
ಲೋಲಲೋಚನಗಳನು ಕೊಟ್ಟಾ
ಭಾಳನೇತ್ರನು ಬಂದು ನಿನ್ನಯ ಹಸ್ತದೊಳಗಿರಲು
ಮೇಲುಗತಿ ಮತಿಯುನ್ನು ಬಯಸುತ
ಲೀಲೆಯಿಂದಲಿ ನಿತ್ಯ ಪೂಜಿಸು
ನಾಳೆಗಿಂದಿಗೆಯೆನ್ನದೇ ನೀ ನಿತ್ಯ ಸುಖಿಯಾಗು ೪

ದಾಸಿಮಯ್ಯನಿಗೊಲಿದು ತವನಿಧಿ
ಏಸು ಕಾಲಕೆ ಸವೆಯದಂದದಿ
ದೇಶವರಿಯಲು ಕೊಟ್ಟ ದೇವನು ಹಸ್ತದೊಳಗಿರಲು
ಘಾಸಿಯಾಗದೆ ಯಮನ ದೂತರ
ಪಾಶಕಾಗದೆ ನಿತ್ಯ ಪೂಜಿಸು
ಮೋಸಹೋಗದೆ ಈಶಪದವಿಯ ಪಡೆದು ಸುಖಿಯಾಗು ೫

ಸಿಂಧು ಬಲ್ಲಾಳನಿಗೆ ಕರುಣಿಸಿ
ಕುಂದದಿಳೆಯೊಳು ಲಿಂಗ ಪದವಿಯ
ಚಂದದಿಂದಲಿ ಕೊಟ್ಟ ದೇವನು ಹಸ್ತದೊಳಗಿರಲು
ಮಂದಮತಿಯಲಿ ಕೆಡುವ ಮನವೇ
ಹೊಂದಿಯಡಿಗಳ ನುತಿಸಿ ಪೂಜಿಸಿ
ಮುಂದೆ ಸದ್ಗತಿ ಪಡೆದು ಶಿವನೊಳು ನಿತ್ಯ ಸುಖಿಯಾಗು ೬

ಮಲ್ಲಿಕಾರ್ಜುನ ಪಂಡಿತರಿಗಾ
ಖುಲ್ಲ ಜೈನನು ಕಣ್ಣು ಕೀಳಿಸೆ
ಒಳ್ಳಿತಾಗಿಯೆ ಕಣ್ಣ ಕೊಟ್ಟವ ಹಸ್ತದೊಳಗಿರಲು
ಖುಲ್ಲ ಮನವೇ ನಿತ್ಯ ಪೂಜಿಸಿ
ಒಳ್ಳಿತೆನಿಸುವ ಮಾರ್ಗದಿಂದಲಿ
ಎಲ್ಲರಹುದೆನೆ ನಡೆದು ಶಿವನೊಳು ನಿತ್ಯ ಸುಖಿಯಾಗು ೭

ಲೋಲಶಂಕರದಾಸಿಮಯ್ಯಗೆ
ಕಾಳ ದೈವವ ಸುಡಲಿಗೋಸುಗ
ಭಾಳನೇತ್ರವ ಕೊಟ್ಟ ದೇವನು ಹಸ್ತದೊಳಗಿರಲು
ಕೋಳು ಹೋಗದೆ ನಿತ್ಯ ಪೂಜಿಸಿ
ಲೀಲೆಯಿಂದಲಿ ಹಾಡಿ ಹೊಗಳನು-
ಕೂಲವಾಗಿರು ಶರಣರಿಗೆ ಶಿವನೊಳಗೆ ಸುಖಿಯಾಗು ೮

ಭೂಮಿಯೊಳಗಾ ಮಲಹಣಯ್ಯಗೆ
ಕಾಮಿತಾರ್ಥವನಿತ್ತ ದೇವನು
ಪ್ರೇಮದಿಂದಲಿ ಬಂದು ನಿನ್ನಯ ಹಸ್ತದೊಳಗಿರಲು
ಸೋಮಧರನೊಳು ಬೆರೆಸಬಲ್ಲೊಡೆ
ಕಾಮಕ್ರೋಧಗಳಳಿದು ಪೂಜಿಸು
ಆ ಮಹಾ ಶಿವಶರಣರೊಳು ನೀ ನಿತ್ಯ ಸುಖಿಯಾಗು ೯

ಧರೆಯೊಳೆಲ್ಲರು ಅರಿಯೆ ಬಾಣಾ-
ಸುರಗೆ ಸಾಸಿರ ತೋಳ ಕೊಟ್ಟವ
ಕರುಣದಿಂದಲಿ ಬಂದು ನಿನ್ನಯ ಹಸ್ತದೊಳಗಿರಲು
ಮರೆಯದೆಲ್ಲಾ ವಿಧದ ಪೂಜೆಯ
ಹರುಷದಿಂದಲಿ ಮಾಡಿ ಸುಖರಸ-
ಶರಧಿತೆರೆಯೊಳಗಾಳುತಿರು ನೀ ನಿತ್ಯ ಸುಖಿಯಾಗು ೧೦

ಎಲ್ಲ ಮುನಿಗಳು ಎಲ್ಲ ಮನುಗಳು
ಎಲ್ಲ ಸಿದ್ಧರು ಎಲ್ಲ ಸಾಧ್ಯರು
ಇಲ್ಲಿ ಪಡೆದರು ನಿನ್ನ ಹಸ್ತದ ಲಿಂಗವನು ಭಜಿಸಿ
ಅಲ್ಲಿಗಲ್ಲಿಗೆ ಹರಿವ ಬುದ್ಧಿಯ
ಸಲ್ಲವಿಡು ನೀ ನಿತ್ಯ ಪೂಜಿಸು
ಇಲ್ಲಿರುವ ಷಡಕ್ಷರಿಯ ವರನಲ್ಲಿ ಸುಖಿಯಾಗು ೧೧

* * *

## ಎಂದಿಗಾದಪುದೋ

ಅಂಗಜಾರಿಗೆ ಮೆಚ್ಚಿ ಮರುಳಾ-
ಗಂಗಭಾವವ ತೊರೆದು ಕೃತ್ಯವ
ಹಿಂಗಿ ಹೊರಗನು ಮರೆವ ಸುಖವದು ಎಂದಿಗಾದಪುದೋ ॥ಪ॥

ಎಳೆಯ ಚಂದ್ರನ ಧರಿಸಿದಾತಗೆ
ಒಲಿದ ಫಣಿಕುಂಡಲದ ಗರುವಗೆ
ಪುಲಿಯ ಚರ್ಮವನುಟ್ಟು ಗಜಚರ್ಮವನು ಹೊದ್ದವಗೆ
ಹೊಳೆವ ಕೆಂಜೆಡೆ ಮುಗುಳು ನಗೆಗಳ
ಚಲುವ ಶಿವನಿಗೆ ಮೆಚ್ಚಿ ಮರುಳಾ-
ಗಳಿದು ತನುಗುಣವರಿಯದಿರ್ಪುದು ಎಂದಿಗಾದಪುದೋ ೧

ಭಸಿತ ಕಾಂತಿಯ ಕಾಯದಾತಗೆ
ಮಿಸುಪ ಫಣಿಕಂಕಣದ ನೀರಗೆ
ಹಸಿಯ ಶಿರಮಾಲೆಗಳ ಕೊರಳೊಳು ಧರಿಸಿದಾತನಿಗೆ
ನಿಶಿತ ಶೂಲದಿ ಹೆಣನ ಪಿಡಿದಿಹ
ಅಸಮ ನೇತ್ರಗೆ ಮೆಚ್ಚಿ ಮರುಳಾ-
ಗಶನವುದಕವ ತೊರೆವುದದು ತಾನೆಂದಿಗಾದಪುದೋ ೨

ಕೊರಳಗರಳದ ರೇಖೆಯಾತಗೆ
ಮರುಳುಗಳ ಕೂಡಾಡುವಾತಗೆ
ಹರಿ ಸುರೇಂದ್ರರ ಹೆಣ್ಣತೊತ್ತಿರ ಮಾಡಿಕೊಂಡವಗೆ
ಸರಸಿಜಾಸನ ಶಿರವ ಕರದೊಳು
ಧರಿಸಿದಾತಗೆ ಮೆಚ್ಚಿ ಮರುಳಾ-
ಗಿರುಳು ಹಗಲೆಂದರಿಯದಿಹ ಸುಖವೆಂದಿಗಾಪುದೋ ೩

ತನ್ನ ಮೋಹದಿ ನೆನೆವ ಭಕುತರ
ಮುನ್ನ ತಾನೇ ಮೋಹಿಪವನಿಗೆ
ತನ್ನನೊಲಿಸುವ ಶರಣರಿಗೆ ತಾ ಮುನ್ನನೊಲಿವವಗೆ
ಹೊನ್ನು ಹಾವಿಗೆ ಮೆಟ್ಟಿ ಸುಳಿವಗೆ
ಎನ್ನ ಮನ ತಾ ಮೆಚ್ಚಿ ಮರುಳಾ-
ಗಿನ್ನು ಹೊರಬಳಕೆಗಳ ಮರೆವುದು ಎಂದಿಗಾಪುದೋ ೪

ಬೆರಳನಾದರು ಕೊಟ್ಟು ಆತಗೆ
ಕರುಳನಾದರು ಕೊಟ್ಟು ಆತಗೆ
ಇರದೆ ತನು ಮನ ಧನವನೆಲ್ಲಿವ ಸೂರೆಗೊಟ್ಟವಗೆ
ಗರುವನಾತನ ಇಚ್ಛೆಯೊಳು ನಾ-
ನಿರುತ ವರಿಸಿಯೆ ಮೆಚ್ಚಿ ಮರುಳಾ-
ಗಿರುತ ಹಸಿನಿದ್ರೆಗಳ ಮರೆವುದು ಎಂದಿಗಾದಪುದೋ ೫

ಚಂದ್ರ ಕೋಟಿಯ ಪ್ರಭೆಗಳೊಬ್ಬುಳಿ
ಸಾಂದ್ರಮಾಗಿಯೆ ಪುರುಷ ಕೃತಿಯಿಂ
ಚೆಂದವಡೆದಿಹ ಚಲುವ ದೇವಗೆ ಮೆಚ್ಚಿ ಮರುಳಾಗಿ
ಬಂದಡರಿಯದೆ ಬೈದಡರಿಯದೆ
ನಿಂದಡರಿಯದೆ ನೆರೆದಡರಿಯದೆ
ಕೊಂದಡರಿಯದೆ ಹೊರಗೆ ಮರೆವುದು ಎಂದಿಗಾದಪುದೋ ೬

ಕಂತು ಕೋಟಿಯ ರೂಪಪಾದದೊ
ಳಾಂತ ಚಲುವಿನ ಶಿವಷಡಕ್ಷರ
ಕಾಂತನಿಗೆ ನಾ ಸಿಕ್ಕಿ ಹೊರಗನು ಮರೆದು ಮರುಳಾಗಿ
ನಿಂತೊಡೆಲ್ಲಿಯು ಕೂತೊಡೆಲ್ಲಿಯು
ಭ್ರಾಂತನಂದದಿ ಕಲ್ಲು ಮರನಾ-
ಗಿಂತು ಪರವಶದಂಗಭಾವವು ಎಂದಿಗಾದಪುದೋ ೭

* * *

## ಎಂದಿಗೊಲಿದಪನೋ

ಹಾಡಿದವರಿಗೆ ಬೈದಡವರಿಗೆ
ಕಾಡಿದವರಿಗೆ ಕೊಂದಡವರಿಗೆ
ಬೇಡಿದಿಷ್ಟವ ಕೊಡುವ ದಯನಿಧಿ ಎಂದಿಗೊಲಿದಪನೋ ॥ಪ॥

ಕಲ್ಲಿಲಿಟ್ಟಂಥವರಿಗೊಲಿದನು
ಬಿಲ್ಲಿನಲಿ ಹೊಯ್ದವರಿಗೊಲಿದನು
ಪುಲ್ಲಶರನ ವಿಕಾರಿಯೆನಿಸಿದ ಶ್ವೇತನಿಗೆ ಒಲಿದ
ಸಲ್ಲದುದನೇ ನುಡಿದು ನಗಿಸಿದ-
ಗಲ್ಲಿಯಾಕ್ಷಣ ಒಲಿದ ದೇವನು
ಒಳ್ಳಿದನು ಇಂತಪ್ಪ ದಯನಿಧಿ ಎಂದಿಗೊಲಿದಪನೋ ೧

ಮರೆದು ಈಶನ ನೆನೆದರಾದಡೆ
ಸುರರ ಪದವಿಗಳಾಗುತಿರ್ಪವು
ಅರಿದು ಈಶನ ನೆನೆದರಾದಡೆ ತನ್ನ ಪದವೀವ
ದುರುಳನಾದೆನು ಮೊದಲೆ ಭಜಿಸದೆ
ಮರುಳನಾದೆನು ಘನವನರಿಯದೆ
ಹರಹರಾ ಇಂತಪ್ಪ ದಯನಿಧಿ ಎಂದಿಗೊಲಿದನೋ ೨

ಬಿದಿರಿದುದಕಕೆ ಹರಿದ ಎಸಳಿಗೆ
ಪದಪಿನಿಂದಲಿ ಇಂದ್ರಪದವಿಯ-
ನೊದಗಿಸಿಯೆ ತಾನವರಿಗಿತ್ತನು ಮುಗ್ಧೆಯನ್ನಾಳ್ದ
ಪದುಳದಿಂ ಪೂಜಿಸದೆ ಕೆಟ್ಟೆನು
ಮುದದಿ ಮುನ್ನವೆ ಹೊಗಳದಾದೆನು
ಸದಮಲಾತ್ಮಕನಾದ ದಯನಿಧಿ ಎಂದಿಗೊಲಿದಪನೋ ೩

ಸಟೆಗಳಿಂದಲಿ ಪೂಜಿಸಲು ತಾ
ದಿಟಗಳಿಂದಲಿ ಪೂಜಿಸಲು ತಾ-
ನಟಮಟ ವ್ಯಾಪಾರದಿಂದಲಿ ಪೂಜಿಸಲು ಬಳಿಕ
ಕುಟಿಲದಿಂದಲಿ ಪೂಜಿಸಿದೊಡಂ
ನಿಟಿಲನೇತ್ರನು ತನ್ನ ಪದವಿಯ
ಘುಟಿಸಿ ಕೊಡುವಿಂತಿಪ್ಪ ದಯನಿಧಿ ಎಂದಿಗೊಲಿದಪನೋ ೪

ದುರುಳನಾದೆನು ಮೊದಲೆ ಭಜಿಸದೆ
ಮರುಳನಾದೆನು ಘನವನರಿಯದೆ
ಹರಹರಾ ಇಂತಪ್ಪ ಹರನೇ ನಿಮ್ಮನೊಲಿಸುಹರ
ಚರಣರಕ್ಷೆಗೆ ಸರಿಯನಾಹೆನೆ
ಬಿರುದು ನಿಂದೆನಗಿಲ್ಲ ಕೊರತೆಯು
ಬಿರುದಿನ ಷಡಕ್ಷರಿಯ ಲಿಂಗವೆ ಒಲಿದು ಕೃಪೆಯಾಗು ೫

ನರ ಕೂರಂಬಿನಲ್ಲೆಚ್ಚೃವಂಗೊಲಿದೆಯಯ್ಯ! ಅರಳಂಬಿನಲ್ಲೆಚ್ಚ ಕಾಮನನುರುಹಿದೆ! ಇರುಳು ಹಗಲೆನ್ನದೆ ಪ್ರಾಣಘಾತವ ಮಾಡಿದ ಬೇಡನ ಕೈಲಾಸಕ್ಕೊಯ್ದೆಯಯ್ಯ! ಎನ್ನ ನೇತಕ್ಕೊಲ್ಲೆ ಕೂಡಲ ಸಂಗಮದೇವಾ!

—ಬಸವಣ್ಣನವರು

* * *

# ಲಿಂಗವು ಇರಲು ಶಿವ

ಆವ ಪರಿಯಲಿ ತಿಳಿಯಬಾರದು
ದೇವ ನಿಮ್ಮಯ ಶರಣರಿರವನು
ಭಾವದೊಳು ನಾ ತಿಳಿವೆ ಲಿಂಗವು ಇರಲು ಶಿವನೆಂದು ॥ಪ॥

ಧಾರುಣಿಯೊಳಾ ಉದ್ಭಟಯ್ಯನು
ಚಾರಮಾಂಕನು ಚೋಳರಾಯನು
ಮಾರವೈರಿಯ ಬೆರಸಲಿಲ್ಲವೆ ಅವರ ಪರಿಯಂತೆ
ಧಾರುಣಿಯು ಪಾಲಿಸುತ ಗುಪ್ತ ಉ-
ದಾರ ಭಕ್ತಿಯು ಮಾಡುತಿಹರೋ
ಆರು ಬಲ್ಲರು ನಿಮ್ಮ ಶರಣರ ತಿಳಿಯಲೆಂತಹುದೋ- ೧

ಬಸವರಾಜನು ಚೊಕ್ಕನೈನಾ-
ರಸಮುಕೇಶಿಯು ರಾಜರಿವರುಗ-
ಳೊಸೆದು ಶಿವನೊಳು ಬೆರೆದರಲ್ಲವೆ ಅವರ ಪರಿಯಂತೆ
ವಸುಧೆಯೊಳು ಮಂತ್ರಪ್ರಭಾವದಿ
ಎಸೆವ ಶಿವನೊಳು ಗುಪ್ತ ಭಕ್ತಿಯ
ಬೆಸಗೆಯೊಳಗಿರುತಿಹರು ಶರಣರ ತಿಳಿಯಲೆಂತಹುದೋ ೨

ಧಾರುಣಿಯೊಳಾ ಮಲುಹಣಯ್ಯನು-
ದಾರ ಸೌಂದರ ಪುಂಡ ಜಂಗಮ
ವಾರವಧುಗಳ ಬೆರಸಲಿಲ್ಲವೆ ಅವರ ಪರಿಯಂತೆ
ಆರು ಬಲ್ಲರು ವಿಟರ ತೆರದಿಂ
ಮಾರವೈರಿಯು ಗುಪ್ತ ಭಕ್ತಿಯ-
ನಾರ ಪರಿಯಲಿ ಮಾಡುತಿಹರೋ ತಿಳಿಯಲೆಂತಹುದೋ ೩

ಮೇದಿನಿಯೊಳಾ ಮಲ್ಲಶೆಟ್ಟಿಯು
ಆದಿಮೈಯನು ಶಂಕರೇಶನು
ಸಾಧಿಸುತ್ತಲೆ ವ್ಯವಹರಂಗಳಲಿರ್ದ್ದರವರಂತೆ
ಆದಿವಿಡಿದೊಂದುದ್ಯಮಂಗಳ
ಲಾದಿ ಲಿಂಗದ ಗುಪ್ತ ಭಕ್ತಿಯ
ವೇದಿಸಿಹರೋ ನಿಮ್ಮ ಶರಣರು ತಿಳಿಯಲೆಂತಹುದೋ ೪

ಪೊಡವಿಯೊಳಗೆಲ್ಲರಿವ ತೆರದಿಂ
ಮಡಿವಳನು ಯಂಕಾಳಿಗಳು ಪುಲಿ-
ಯುಡುಪರೆಂಬರು ದುಪಟಿ ತೊಳೆವುತಲಿರ್ದ್ದರವರಂತೆ
ಮಡಿಯು ಮಾಡುತ ಭಕ್ತವಸ್ತ್ರವ
ಅಡಗಿ ಶಿವನೊಳು ಗುಪ್ತ ಭಕ್ತಿಯ
ನಡೆಸುತಿಹರೋ ನಿಮ್ಮ ಶರಣರು ತಿಳಿಯಲೆಂತಹುದೋ ೫

ಧಾರುಣಿಯೊಳಾ ಅಮುಗಿದೇವನು-
ವಾರ ಜೇಡರ ದಾಸಸತಿ ಸಂ-
ಸಾರದೊಳಗಿರುತಿರ್ದ್ದುದಿಲ್ಲವೆ ಅವರ ಪರಿಯಂತೆ
ಆರು ಬಲ್ಲರು ಶರಣರನು ಸಂ-
ಸಾರವನು ಮರೆಗೊಂಡು ಗುಪ್ತದಿ
ಮಾರವೈರಿಯ ಬೆರಸುತಿಹರೋ ತಿಳಿಯಲೆಂತಹುದೋ ೬

ಇಲ್ಲಿ ಚನ್ನಯ್ಯಗಳು ಲದ್ದೆಯ
ಹುಲ್ಲು ಸೋಮಯ್ಯಗಳು ಬಡತನ-
ದಲ್ಲಿ ಶಿವನೊಳು ಬೆರಸಲಿಲ್ಲವೆ ಅವರ ಪರಿಯಂತೆ
ಹುಲ್ಲು ಮಾರುತ ಬಡವರಂದದಿ
ಖುಲ್ಲ ಮಾನವರರಿಯದಾ ಶಿವ
ನಲ್ಲಿ ಗುಪ್ತದಿ ಬೆರಸುತಿಹರೋ ತಿಳಿಯಲೆಂತಹುದೋ ೭

ಕುರಿಯ ಕಾಯುತ ಗೊಲ್ಲಳಯ್ಯನು
ತರುವ ಕಾಯುವ ಚಂಡಿದೇವನು
ಪರಮ ತಿರುಮೂಲಯ್ಯಗಳು ಇರುತಿರ್ದರವರಂತೆ
ಕುರಿಯ ತುರುವಂ ಕಾಯ್ದು ಗುಪ್ತದಿ
ಹರನ ಭಕ್ತಿಯ ಮಾಡುತಿಹರೋ
ಶರಣರಿರವನು ನರರ ಭಾವದಿ ತಿಳಿಯಲೆಂತಹುದೋ ೮

ಉದಿಸಿ ಧರೆಯೊಳು ಹಲವು ಪರಿಯಲಿ
ಹುದುಗಿ ಲಿಂಗದಿ ಗುಪ್ತ ಭಕ್ತಿಯ
ಪದುಳದಿಂದಲಿ ಮಾಡುತಿಹರೋ ತಿಳಿಯಲೆಂತಹುದು
ಅದರ ದೆಸೆಯಿಂದರಿಯಬಾರದು
ಸದಮಲಾತ್ಮಕ ಲಿಂಗವಂತರ
ಮುದದಿ ಶಿವಷಡಕ್ಷರಿಯ ವರ ನೀನೆಂಬೆನದರಿಂದ ೯

* * *

## ಕರುಣಿ ಎಂತಹನು

ಕರುಣವಾರಿಧಿ ಶಿವನು ಎನುತಲಿ
ಅರಿದ ಮರುಳರು ಕವಿಗಳೆಂಬರು
ಬರಿಯ ತರಕಟ ಕಾಡುವಾತನು ಕರುಣಿ ಎಂತಹನು ॥ಪ॥

ಆದಿಯ್ಯೆಯನು ಜೈನರುಗಳಾ
ವಾದಕೋಸುಗ ಕರೆಯ ಬರುತಿರೆ
ಹಾದಿಯೊಳಗಂ ಕಾಡಿದಾತನು ಅಂತುಮಲ್ಲದಲೆ
ಮಾದಿರಾಜನ ಅರಸಿ ಬರುತಿರೆ
ಭೇದಿಸದೆಯುರೆ ಕಾಡಿದಾತನು
ಮಾಧವೋದ್ಭವವೈರಿಯೀತನು ಕರುಣಿ ಎಂತಹನು ೧

ಭೂಮಿಯೊಳಗತಿ ಚೋದ್ಯ ಮೈದುನ
ರಾಮ ತಂದೆಯ ಕರೆಯ ಬರುತಿರೆ
ಆ ಮಹಾತ್ಮನ ಕಾಡಿದಾತನು ಅಂತುಮಲ್ಲದಲೆ
ಪ್ರೇಮ ತನ್ನೊಳಗಿರ್ದ ನೃಪಸತಿ
ಕಾಮದೇವನ ಬಳಿಯ ನಂಬಿಯ
ನಾಮವನು ನೆನೆವುತಲಿ ಕಾಡಿದ ಕರುಣಿ ಎಂತಹನು ೨

ಕ್ಷಿತಿಗೆ ಮೆರೆವಾ ಕಾಂಚಿಪುರದಲಿ
ಪತಿವ್ರತಾಮಣಿ ಚಂಗಳವ್ವನ
ಸುತನ ಕೊಲಿಸಿದ ಮರುಕವಿಲ್ಲದೆ ಅಂತುಮಲ್ಲದಲೆ
ಸುತನನೊರ್ವನ ಓಡಿದು ಬಡತನ
ಯುತದಿ ಬಾಳುವ ನಂಬಿಯಕ್ಕನ
ಕೃತಕದಿಂದಲಿ ಮಗನ ಕೊಲಿಸಿದ ಕರುಣಿ ಎಂತಹನು ೩

ಕೋಲುರೊಳಗೆಲ್ಲವರ ತೆರದಿಂ
ಹಾಲ ಸವಿಸಲು ತಂದು ಮುಗ್ಧಾ
ಬಾಲೆಯನು ತರಕಟವ ಕಾಡಿದನಂತುಮಲ್ಲದಲೆ
ನೀಲಕಂಠಯ್ಯಗಳು ಆಣೆಗೆ
ಬಾಲೆಯೊಳು ಮಾತಾಡದಿರುತಿರೆ
ಬಾಳವಾಗಿಯೆ ಕಾಡಿದಾತನು ಕರುಣಿ ಎಂತಹನು ೪

ಮಡದಿ ಪುರುಷರು ನುಡಿಯದಿರ್ದೊಡೆ
ಜಡಿದು ಜರಿದರೆ ಕೋಪಮಪ್ಪುದೆ
ಕಡೆಗೆ ಪುರುಷರಿಗದನ ಹೋಲುವೆಯಂತೆ ನಾನಿನ್ನ
ಬಿಡದೆ ಬಣ್ಣಿಸಿ ಪಾಡುತಿರೆ ಎ-
ನ್ನೊಡನೆ ನುಡಿಯದೆಯಿರಲು ಜರಿದೆನು
ಮೃಡ ಷಡಕ್ಷರವರನೆ ಕೋಪವು ಬೇಡಯೆನ್ನೊಡನೆ ೫

ದೇವನೊಳ್ಳಿದನೆಂದು ಮುಯ್ಯೊನಲು ಬೇಡ. ತರಕಟ ಕಾಡಿಹನೊಳ್ಳಿದನೆ ? ಅಳಿಸುವ ನಗಿಸುವನೊಳ್ಳಿದನೆ ? ಬೆಚ್ಚದೆ ಬೆದರದೆ ತೊತ್ತುತನವ ಮಾಡಲು ತನ್ನನೀವ ಕೂಡಲ ಸಂಗಮ ದೇವ.

— ಬಸವಣ್ಣನವರು

* * *

# ನರರಿಗೆಂತಹುದು

ಒಲಿದ ಲಲನೆಯುನಗಲುವದು ತಾ
ಒಲಿದು ಲಿಂಗದಿ ಮನವನಿಟ್ಟರೆ
ಚಲಿಸದದು ಶಿವನಂಶಕಲ್ಲದೆ ನರರಿಗೆಂತಹುದು ॥ಪ॥

ಮುನಿದ ನಲ್ಲಗೆ ಲಲ್ಲೆಗರದತಿ
ವಿನಯದಿಂದಲಿ ತೋರಿ ಕುಚವನು
ಇನಿಯನೆದೆಯೊಳು ಸಾರ್ಚಿಯಧರವ ಜಿಹ್ವೆಯೊಳಗಿರಿಸಿ
ಮುನಿಸು ತಿಳಿಯದಡೆನ್ನ ಕೊಲ್ಲೆಂ-
ದೆನುತ ಮುದ್ದಿಸಿ ದೈನ್ಯಗರೆವಳ
ಮನದಿ ನೆನೆಯದೆ ಇರ್ಪುದದು ತಾ ನರರಿಗೆಂತಹುದು ೧

ಒಲಿದ ಪುರುಷನ ವಿನಯದಿಂದಲಿ
ಎಳೆದು ಮಂಚದ ಮೇಲೆ ಮಲಗಿಸಿ
ಬಲುಹಿನಿಂ ತಾಂಬೂಲ ಗುಟುಕನು ಕೊಟ್ಟು ಬಿಗಿದಪ್ಪಿ
ನಲಿದು ಅಧರವ ಸವಿದು ಸೊಗಸಿಂ
ತಳಪುಗಂಗಳ ಮುಚ್ಚಿ ತೆರೆವಳ
ನುಳಿವುದದು ಶಿವನಂಶಕಲ್ಲದೆ ನರರಿಗೆಂತಹುದು ೨

ಕುರುಳು ಕುಣಿವುತ ಮುತ್ತಿನೋಲೆಯ
ಮಿರುಗು ಹೊಳೆವುತ ಕೊರಳ ಮುತ್ತಿನ
ಸರವು ಕಲಕುತ ತೊಟ್ಟ ಕುಚಯುಗವದರುತಿರೆ ಬಳಿಕ
ಸೆರಗಿನಿಂದಲಿ ಬೆಮತ ನಲ್ಲನ
ಒರಸಿ ಮುಖವನು ಮರಳಿ ನೆರೆವಳ
ತೊರೆವುದದು ಶಿವನಂಶಕಲ್ಲದೆ ನರರಿಗೆಂತಹುದು ೩

ತೊಡೆಗಳದರುತ ನಡವು ಬಳಕುತ
ಮುಡಿಯು ಕುಣಿಯುತ ಸಡಲಿ ಬೈತಲೆ
ಒಡನೆ ಗಂಟಿಕ್ಕಿರಲು ತಿಲಕವು ಬೆಮರಿನಿಂದಿಳಿಯೆ
ಮಡದಿ ಮುತ್ತಿನ ಬೊಟ್ಟು ರಂಜಿಸೆ
ಮುಡಿದ ಕುಸುಮದ ಭಾವದಳವನು
ಬಿಡುವುದದು ಶಿವನಂಶಕಲ್ಲದೆ ನರರಿಗೆಂತಹುದು ೪

ಸುರತದಂತ್ಯದಿ ಬಳಲಿದಾತನ
ನೊರಗಿಸುತ ಕುಚಯುಗದ ಮಧ್ಯದಿ
ಪರವಶದಿ ಮೆರೆದಿರುವ ಚಲುವೆಯ ಸೊಗಸನಗಲುವರೆ
ಪರಕೆ ಪರತರ ಶಿವಷಡಕ್ಷರ
ಪರಮಲಿಂಗದಿ ಮನವು ಸಿಲ್ಕಿರೆ
ಹೊರಗೆ ಮರೆದಿಹ ಶರಣಗಲ್ಲದೆ ನರರಿಗೆಂತಹುದು ೫

ಅವಳ ವಚನ ಬೆಲ್ಲದಂತೆ. ಹೃದಯಲಿಪ್ಪುದು ನಂಜು ಕಂಡೆಯ್ಯಾ. ಕಂಗಳಲೊಬ್ಬನ ಕರೆವಳು. ಮನದಲೊಬ್ಬನ ನೆನೆವಳು. ಕೂಡಲ ಸಂಗಮದೇವಯ್ಯಾ ಕೇಳಯ್ಯಾ ಮಾನಿಸ ಗಳ್ಳಿಯ ನಂಬದಿರಯ್ಯಾ.

—ಬಸವಣ್ಣನವರು

* * *

# ಎಂದಿಗಹುದೊ

ಎಂದಿಗಹುದೋ ನಿಮ್ಮ ನೆನೆವುದು
ಎಂದಿಗಹುದೋ ನಿಮ್ಮ ನಿಜವದು
ಎಂದಿಗಹುದೋ ನಿಮ್ಮ ಪೂಜೆಯ ಮಾಡುವಾ ಸುಖವು ॥ಪ॥

ಕಂಡ ಬಳಿಯಲಿ ನದಿಯು ಕೊಳಗಳು
ಕಂಡ ಬಳಿಯಲಿ ಪತ್ರ ಪುಷ್ಪವು
ಕಂಡ ಬಳಿಯಲಿ ನಿಮ್ಮ ಪೂಜೆಯ ಮಾಡಲೊಲ್ಲದೆಯೆ
ಕಂಡ ಕಂಡೂರುಗಳ ತಿರುಗುತ
ಕಂಡ ಕಂಡರ ಮನೆಗೆ ಹೊಕ್ಕರೆ
ತುಂಡುಮೂಳನು ಆಗಿ ಸುಮ್ಮನೆ ಕೆಟ್ಟೆನಕಟಕಟ ೧

ಶೂಲಪಾಣಿಯ ಚರಣಯುಗವನು
ಲೀಲೆಯಿಂದಲಿ ನೆನೆದು ನೆನೆದೂ
ಕಾಲ ಕರ್ಮಂಗಳನು ಗೆಲ್ಲುತ ಮುಕ್ತಿ ಪಡೆಯದೆಯೆ
ಹೇಲನರಸುತ ತಿರಗುತಿರ್ಪಾ
ಮೂಳಹಂದಿಯ ತೆರದಿ ತ್ರೈವಿಧ
ಹೇಳನದ ಹುಚ್ಚಿಂದ ನಿಮ್ಮನು ಮರೆತೆನಕಟಕಟ ೨

ಎಳೆಯ ಚಂದಿರಧರನಿಗೊಲಿದು
ಎಳಸದನ್ಯನ ಸುಖವನಂಗವು
ಕಳೆಗಳರಿಯುತ ನಿತ್ಯ ಸುಖವನು ಪಡೆಯಲೊಲ್ಲದಲೆ
ಎಲುವು ನರಗಳ ತೊಗಲು ಪೊದೆದಿಹ
ಹಳೆಯ ತೊಗಲನು ಪೊತ್ತು ನಾ ನೆರೆ
ಹೊಲೆಯನಂತಿರೆ ಮರೆದು ನಿನ್ನನು ಕೆಟ್ಟೆನಕಟಕಟ ೩

ಸತ್ಯ ಗುರುಗಳ ಕೂಡಲಾಡುತ
ನಿತ್ಯ ಶಿವನನು ಭಜಿಸಿ ನುತಿಸುತ
ಮರ್ತ್ಯದಾರ್ತಿಯು ಬಾರದಂತದು ಮಾಡಿಕೊಳ್ಳದಲೆ
ವ್ಯರ್ಥವಾಗಿಯೆ ಕೆಡುವ ಹೆಣ್ಣಲಿ
ಚಿತ್ತ ಕೆಡಿಸುತಲಧರ ಕಚ್ಚುವ
ಕತ್ತೆ ಹೊಲೆಯುನದಾಗಿ ನಿಮ್ಮನು ಮರೆದೆನಕಟಕಟ ೪

ಸೃಷ್ಟಿಯೊಳಗೇ ಉದಿಸಿ ನಾನತಿ
ಶ್ರೇಷ್ಠನಲ್ಲವು ಹಿರಿಯರೊಳಗೂ
ನಿಷ್ಠೆಯಿಲ್ಲವು ಲಿಂಗದಲ್ಲಿಯು ಬ್ರಹ್ಮನಾನಲ್ಲ
ಕಷ್ಟತನವನು ಮರೆಸಿ ನಿಮ್ಮಯ
ನಿಷ್ಠೆ ನಿಜವೊಲಿದಿತ್ತು ಕರುಣೆಯು
ದೃಷ್ಟಿಯಲಿ ನೋಡೈ ಷಡಕ್ಷರ ಲಿಂಗವೇ ಎನ್ನ ೫

ಎಂದೋ ಸಂಸಾರ ದಂದುಗ ಹಿಂಗುವದು ? ಎಂದೋ ಮನದಲ್ಲಿ ಪರಿಣಾಮುವಹುದೆನಗೆಂದೋ ? ಎಂದೋ ಕೂಡಲ ಸಂಗಮದೇವ ಇನ್ನೆಂದೋ ಪರಮ ಸಂತೋಷದಲ್ಲಿಹುದೆನಗೆಂದೋ ?

— ಬಸವಣ್ಣನವರು

* * *

## ಒಡಲು ಹಿಡಿದ ಜಡನು ನಾನು

ಒಡಲು ಹಿಡಿದಿಹ ಜಡನು ನಾನೈ
ಒಡಲು ಇಲ್ಲದ ಅಜಡ ನೀನೈ
ಒಡೆಯ ನೀನೇ ಒಲಿಸದನಕಾ ಒಲಿಸಲಾಪುವನೇ ॥ಪ॥

ಹೆಳವ ಮರದಾ ತುದಿಯೊಳಿರ್ದಾ
ಫಲವ ಬಯಸಿಯೆ ಬಳಲುವಂದದಿ
ಚಲುವ ಹೆಣ್ಣನು ಅಧಮ ಬಯಸುತ ಬಳಲುವಂದದಲಿ
ಎಳೆಯ ಚಂದಿರ ಧರನ ಸುಖವನು
ಎಳೆಸಲಹುದೇ ಎನಗೆ ಶಿವನೀ
ನೊಲಿದ ನಿಮ್ಮಯ ಕರುಣವೆನ್ನೊಳಗಾಗದಿರದನಕ ೧

ದಾಸಿಯರಸನ ಬಯಸಿ ಶರಗನು
ಓಸರಿಸುವಂದದಲಿ ಮುಂದದು
ಘೋಷ ಗಂಟೆಯು ಜಾವವನು ತಾ ಬಯಸುವಂದಲಿ
ಈಶ ನಿಮ್ಮಯ ನಿತ್ಯ ಸುಖವನು
ಹೇಸಿ ಮನುಜನು ತನಗೆ ಬಹು ದಿನ
ಆಸರಿಸದೇ ನಿನ್ನ ನೀನೇ ಒಲಿಯದಿರದನಕ ೨

ಒಡೆದು ಹೋದಾ ಪ್ರತುಮೆ ಚಲುವಾ
ಗುಡಿಯ ಬಯಸುವ ತೆರದಿ ಬಹುತರ
ಬಡವನಾ ಧನ ಬರಿದೆ ಬಯಸಿಯೆ ಬಳಲುವಂದದಲಿ
ಒಡೆಯ ನಿಮ್ಮಯ ನಿತ್ಯ ಸುಖವನು
ಬಡವ ನಾ ನೆರೆ ಬಯಸ ಬಹುದೇ
ಬಿಡದೆ ನೀನೇ ಕರುಣಿಯೆನ್ನೊಳಗಾಗದಿರದನಕ ೩

ಬಾಳದೋತ್ತಮ ಕನಕ ಚಿತ್ರದ
ಶಾಲೆಗಳ ತಾ ಬಯಸುವಂದದಿ
ಆಳು ಅಂದಣವನ್ನು ಏರಲು ಬಯಸುವಂದದಲಿ
ಶೂಲಧರ ನಾ ನಿಮ್ಮ ಸುಖವನು
ಕಾಲ ಬಡವನು ಬಯಸಬಹುದೇ
ಲೀಲೆಯಿಂದಲೆ ನಿನ್ನ ನೀನೇ ಒಲಿಯದಿರದನಕ ೪

ಒಡಲನಿತ್ತೂ ಸುತರನಿತ್ತೂ
ಮಡದಿ ಧನವನು ಧರಣಿಯಿತ್ತೂ
ಪಡೆದರೈಸೇ ಶಿವನ ಸುಖವನು ಬರಿದೆ ಬಪ್ಪುದೆ ತಾ
ಒಡೆಯನಹ ಷಡಕ್ಷರಿಯ ಲಿಂಗವು
ಬಡವನಿವನೂ ಎಂದು ಬಿಡದೇ
ಒಡನೆ ಕರುಣೆಯುದಾಗದನಕಾ ಎನ್ನೊಳಪ್ಪುವುದೋ ೫

ಲೇಸ ಕಂಡು ಮನ ಬಯಸಿ ಬಯಸಿ ಆಸೆ ಮಾಡಿದಡಿಲ್ಲ ಕಂಡಯ್ಯ. ತಾಳ ಮರಕ್ಕೆ ಕೈಯ ನೀಡಿ ಮೇಲೆ ನೋಡಿ ಗೋಣು ನೊಂದುದಯ್ಯ. ಕೂಡಲ ಸಂಗಮದೇವ ಕೇಳಯ್ಯ ನೀನೀವ ಕಾಲಕ್ಕಲ್ಲದಿಲ್ಲ ಕಂಡಯ್ಯ.

—ಬಸವಣ್ಣನವರು

* * *

## ಎಂದಿಗೆ ದೊರಕುವದು

ರಾಗ : ಗುಂಡಕ್ರಿ

ಎಂದಿಗೆ ದೊರಕುವದನವರತ ಭವನಾ-
ನಂದದಿ ಪೂಜಿಪ ಪರಸೌಖ್ಯವು ತಾ
ಸಂದು ಸುಖಾರ್ಣವತೆರೆಯೊಳಗಿಪ್ಪುದು ಎಂದಿಗೆ
[ದೊರಕುವದು ॥ಪ॥

ಕಾಡುವ ಮಾಯೆಯ ಜಾಡಿಸಿ ಭವವ ವಿ-
ಭಾಡಿಸಿ ಕಾಲನನೇಡಿಸಿ ಕಾಮನ-
ನೋಡಿಸಿ ಮರವೆಯು ಕಾಡಿಗೆ ವಹ್ನಿಯು ಪರಿವೇಷ್ಟಿಸಿ ಬಳಿಕ
ನೋಡುತ ಲಿಂಗವ ಮೂಡುತ ಗದ್ಗದ
ಪಾಡುತ ಸುಖಜಲವಾಡುತ ನೇತ್ರದಿ
ಬೇಡುತ ಭಕ್ತಿಯ ಕೂಡುವ ಶಿವಸುಖವೆಂದಿಗೆ
[ದೊರಕುವದು ೧

ಕೆರೆ ತೊರೆ ಮಡು ಡೊಣಿ ಪರಿವಾ ನಿರ್ಝರ
ಗಿರಿ ಗುಹೆ ವನಲತೆ ಪರ್ಬದ ಕಾನನ
ಸರರುಹ ಕೊಳದೊಳು ಧುಮುಕುವ ನದಿತಟದೊಳು ಶಶಿ
ಅರೆಯೊಳು ಪುಳಿನ ಸ್ಥಳದೊಳು ನಿರ್ಮಳ [ಶಿಲೆಯೊಳಗೆ
ಪರಮ ಸುಖಸ್ಥಳದೊಳು ಘನಲಿಂಗಕೆ
ಹರುಷದಿ ಪೂಜೆಯು ಮಾಡುವ ಶಿವಸುಖವೆಂದಿಗೆ
[ದೊರಕುವದು ೨

ಶಶಿಕಾಂತದ ಶಿಲೆಯಿಂದಲಿ ರಚಿಸಿದ
ಮಿಸುಪಾ ಕೊಳದೊಳು ಚಂದ್ರನ ಕಿರಣದ
ಪಸರದ ಜಲದೊಳು ಕುಂಕುಮ ಚಂದನ ಕರ್ಪುರವಮಂ
ಬಿಸರುಹದಳದಿಂದರ್ಘ್ಯವ ನೀಡುವ [ಕದದಿ
ಬಿಸರುಹಗಳೊಳುಂ ಮೂರ್ತವ ಮಾಡಿಸಿ
ಶಶಿಕಳೆಧರನಂ ಪೂಜಿಪ ಶಿವಸುಖವೆಂದಿಗೆ ದೊರಕುವದು ೩

ಒಪ್ಪುವ ಲಿಂಗದ ಮೊಗದೊಳು ಮೊಗವಿ-
ಟ್ಟೊಪ್ಪುತ ಗಲ್ಲದೆ ಬೆಮರುವ ಜಲದಿಂ-
ದೊಪ್ಪನೆ ನೆನೆವುತ ನಟ್ಟಾಲಿಗಳಂ ಚಲಿಸದೆ ದೃಢದಿಂದ
ಒಪ್ಪುವ ನಿಟ್ಟಿರೊ ಲಿಂಗವನಾವಗ
ತಪ್ಪದೆ ಚಿತ್ರಿಸಿ ಬರೆದರೊಯೆಂಬು-
ತ್ತಿಪ್ಪಾ ಪರವಶನಂದದ ನಿಜಸುಖವೆಂದಿಗೆ ದೊರಕುವದು ೪

ಕಮಲಪರಾಗದ ಪೀಠವನಿಕ್ಕಿಸಿ
ಕಮಲದ ಸತ್ತಿಗೆಗಳ ಬಳಸುತ ತ-
ತ್ಕಮಲದ ಪತ್ರದ ಬೀಸಣಿಗೆಗಳನು ಬೀಸುತ ಹರುಷದಲಿ
ಕಮಲದ ಕರ್ಣಿಕ ದರ್ಪಣದಿಂದಲಿ
ಕುಮುದದ ಘಂಟೆಯು ನುಡಿಸುತ ಪೂಜಿಪ
ವಿಮಲ ಷಡಕ್ಷರ ಲಿಂಗದ ನಿಜಸುಖವೆಂದಿಗೆ ದೊರಕುವದು ೫

ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿವರಿಯುತ್ತ ಸುರಿವುತ್ತ ಎಂದಿಪ್ಪೆನೋ ! ನೋಟವೇ ಪ್ರಾಣವಾಗಿ ಎಂದಿಪ್ಪೆನೋ ! ಕೂಟವೇ ಪ್ರಾಣವಾಗಿ ಎಂದಿಪ್ಪೆನೋ ! ಎನ್ನ ಅಂಗವಿಕಾರದ ಸಂಗವಳಿದು ಕೂಡಲ ಸಂಗಯ್ಯ ಲಿಂಗ ಲಿಂಗವೆನ್ನುತ್ತ ! —ಬಸವಣ್ಣನವರು

* * *

## ಏತರ ಭಯವೆಮಗೆ

ರಾಗ : ಘೂರ್ಜರಿ

ಕಂಗೆಡಲೇತಕೆ ಕಳವಳಿಸಿಯೆ ನಾ-
ನಂಗಜ ಮಾಯೆಯ ಮನದಬ್ಬರಕಂ
ಲಿಂಗದ ಸೂತ್ರವ ಕರದಲಿ ಪಿಡಿದಿರಲೇತರ ಭಯವೆಮಗೆ ||ಪ||

ಅಂಧಕನಿಗೆ ಸತ್ಪಥವನು ತೋರುವ
ಚಂದದಿ ಮೂಕಗೆ ಮಾತುಂ ಜೀವಿತ-
ಸಿಂಧುವಿನೊಳಗಣ ಹೊಳ್ಳನು ತಪ್ಪಿಸಿ ಪಥವನು ತೋರ್ಪಂತೆ
ಹಿಂದಣ ವಾಸನೆಯನು ಪರಿಹರಿಸುವ
ಮುಂದಣ ಸದ್ಗತಿಯನು ತೋರುವ ಘನ
ಸಂದಪುರಾತರ ವಚನಗಳಿರುತಿರೆ ಏತರ ಭಯವೆಮಗೆ ೧

ವರಸಂಜೀವನದೌಷಧವಿರುತಿರೆ
ಮರಣದ ಭೀತಿಗೆ ಅಂಜಲದೇತಕೆ
ಪರುಷದ ಖಣಿ ತಾ ಮನೆಯೊಳಗಿರುತಿರೆ ಬಡತನಕಂಜುವರೇ
ಶರಣರ ನಿಧಿಯೆಂದೆನಿಸುವ ಪಂಚಾ-
ಕ್ಷರಿ ಜಿಹ್ವಾಗ್ರದ ಕೊನೆಯೊಳಗಿರುತಿರೆ
ದುರಿತಕ್ಕಂಜುವರೇ ಬಡ ಮನವೇ ನಂಬಿರು ಭಯಬೇಡ ೨

ಅಮೃತಾಂಬುಧಿಯಿರೆ ಹಸಿವಿನ ಭಯವೇ
ದ್ಯುಮಣಿಯು ತಾನಿರೆ ತಿಮಿರದ ಭಯವೇ
ಹಿಮಭಯವೇತಕೆ ತಾನಗ್ನಿಯ ಸನ್ನಿಧಿಯಲಿ ಮೂರ್ತವ
ಕ್ರಮಗೆಡಲೇತಕೆ ಚಿದ್ಘನ ಮೂರುತಿ [ಮಾಡಿ
ಅಮಲ ನಿರಾಮಯ ನಿರ್ಗುಣ ನಿಷ್ಕಲ
ಅಮಮ ಷಡಕ್ಷರಿ ಲಿಂಗವು ಇರುತಿರಲೇತರ ಭಯ ನಮಗೆ ೩

ಸ್ವಯಲಿಂಗಾನುಭಾವ ತನಗೆ ದೊರಕೊಂಡ ಬಳಿಕ ದೇವ ಲೋಕವೆಂಬುದೇನೋ ಮರ್ತ್ಯಲೋಕವೆಂಬುದೇನೋ ? ಆವುದರಲ್ಲಿಯೂ ಭೇದವೇನಯ್ಯ ? ಕೂಡಲ ಸಂಗಮದೇವ ಬಳಿಕ ಆಲಸ್ಯವುಂಟೆ ?

—ಬಸವಣ್ಣನವರು

* * *

## ಶಿವಯೋಗದೊಳೆಂದಿಹೆನೋ

ರಾಗ : ಮಾಳವಗೌಳ

ಶಿವಲಿಂಗವ ಹೃತ್ಪಿಂಡದ ಮಧ್ಯದಿ
ತವೆ ಜ್ಞಾನಿಸುತ ಪರವಶಾನಂದದಿ
ಭವಗಿರಿಪವಿಯೆಂದೆನಿಸುವ ಘನ ಶಿವಯೋಗದೊ
[ಳೆಂದಿಹೆನೋ ॥ಪ॥

ಪದಕಂ ಭಾವದ ಗುಡಿ ತೋರಣದಿಂ
ಮದಗಜ ಜಯದಿಂದೆಸೆವನಲತ್ವದಿ
ಮುದವೆಡೆಗೊಂಡಿಹ ಕರಚರಣ ಚತುಷ್ಟಯ ಮಂತ್ರದಿ ಕೂಡಿ
ಒದಗಿಸಿ ಬಹುಮುಖ ಚರಣ ಪದಾತಿಯು
ಪದುಳದಿ ಮಧ್ಯದ ತನುವಿನ ರಥದಿಂ
ಸದಮಳ ಲಿಂಗವ ಹರುಷದಿ ನಾನಿದಿರ್ಗೊಂಬುತ
[ಲೆಂದಿಹೆನೋ ೧

ಚಿನ್ನದ ನೆಲೆಯೊಳು ಬೆಳ್ಳಿಯು ಮೊರಡಿ ಸು
ರನ್ನದ ಗಿರಿಗಳ್ಪಚ್ಚೆಯು ಕೋಡುಗ-
ಳುನ್ನತ ನೀಲದ ಗುಂಡು ಪ್ರವಾಳದ ಲತೆ ವೈಡೂರ್ಯಗಳ
ಸನ್ನುತವೆಸೆವಾ ಹಸುರು ಮುತ್ತು ನಲ
ವಿನ್ನಿಸು ವಜ್ರದ ಅರಗಿಂದೊಪ್ಪುವ
ಹೃನ್ಮಂಡಲಚಿದ್ಭೂಮಿಯು ಮಧ್ಯದಿ ಲಿಂಗದೊಳೆಂದಿಹೆನೋ ೨

ಭೋಂಕನೆ ಕೊತ್ತುವ ವಿದ್ಯುಲ್ಲತೆಯು ಶ
ಶಾಂಕನ ಭಾಸ್ಕರ ಶತಕೋಟಿಪ್ರಭೆ
ಥಿಂಕಿಡುತಂ ತಾ ಬೆಳಗುವ ಬ್ರಹ್ಮಸುರಂಧ್ರದ ಮಧ್ಯದಲಿ
ಶಂಖದ ಘಂಟೆಯು ಜಾಗಟೆ ವಾಸುಕಿ
ಕಿಂಕಿಣಿ ಕಿನ್ನರಿ ವೀಣೆಯ ತೆರದಿಂ
ಝೋಂಕಾರಿಪ ಓಂಕಾರದ ಪ್ರಣವ ಸುನಾದದೊಳೆಂದಿಹೆನೋ ೩

ಕುಟಿಲದ ಮಾಯೆಯ ಹರಿಸಿ ತಮಸ್ಸಿನ
ಪಟಲಕೆ ಜ್ಞಾನದ ಜ್ಯೋತಿಯು ಬೆಳಗಿಸಿ
ಪಟುಗೊಳಿಸುತ ಮದಮಾರುತರಂ ತಾನೇಕಟ ಮಾಡುತಲಿ
ಫುಟನೆ ತದೂರ್ಧ್ವವನಡರಿಸಿಯಾತ್ಮನ
ನಿಟಿಲದ ಮಧ್ಯದ ತೇಜೋರಾಶಿಯು
ಮಠದೊಳು ಚಿನ್ಮಯಲಿಂಗದ ಸಮರಸಮೋಳ
[ದೊಳೆಂದಿಹೆನೋ ೪

ಕರುಣದ ಕಳಕಳವಿಲ್ಲದ ಸುರರುಗ-
ಳರುವಿಗೆ ನಿಲುಕದ ಕಾರ್ತಿಕ ತರುಗಳ
ಬರಿ ಕೋಟಲೆಗಳ ಹೋರಟೆಗೈದವ ಮುನಿಗಳ ಭಾವಕ್ಕೆ
ಅರಿಸದ ಶಾಸ್ತ್ರಕೆ ನಿಲುಕದ ವೇದಕೆ
ಕುರುಪಿಡಲರಿಯದ ಚರಿತನನಘಹರ
ಪರಮ ಷಡಕ್ಷರಿ ಲಿಂಗದ ನಿಜಸುಖಧ್ಯಾನದೊಳೆಂದಿಹೆನೋ ೫

# ಧ್ಯಾನದೊಳೆಂದಿಹೆನೋ

ರಾಗ : ಲಲಿತ

ತಾನೆಂದರಿಯದೆ ಇದಿರೆಂದರಿಯದೆ
ಏನೂ ಇಲ್ಲದೆ ಇರುತಿಹ ಶಿವ ತಾ-
ನಾನಂದದಿ ವರಮೂರುತಿಯಾದನ ಧ್ಯಾನದೊಳೆಂದಿಹೆನೋ ॥ಪ॥

ಘನಮಹಿಮನ ನೆನೆದಾಕ್ಷಣ ಮಾತ್ರದಿ
ಜನಿಯಿಸಿ ಗತಿಸುತಿರುವ ಬ್ರಹ್ಮಾಂಡಂ
ವನಜೋದ್ಭವ ವನಜಾಕ್ಷರು ಜನಿಸಲು ಕರೆದವರೊಲುವಿನಲಿ
ವನಜೋದ್ಭವ ನೀ ಸೃಜಿಯಿಸು ಲೋಕವ
ವನಜಾಕ್ಷನೆ ನೀ ರಕ್ಷಿಸು ಎನುತಲಿ
ಅನುವಿತ್ತವರಿಂ ವಂದಿಸಿಕೊಂಬನ ಧ್ಯಾನದೊಳೆಂದಿಹೆನೋ ೧

ತಪ್ತಸುಕಾಂಚನ ಪ್ರಭೆಗಳ ನೆಲದೊಳು
ದೀಪ್ತಿಸುತಿಹ ರತ್ನಂಗಳ ಕಂಬದಿ
ಒಪ್ಪುವದೊಂದೀ ವಜ್ರದ ತೊಲೆ ಲೋವೆಗಳಿಂ ಚಲುವಾಗಿ
ತಪ್ಪದೆ ಬೆಳಗುವ ಓಲಗಶಾಲೆಯೊ-
ಳಿಪ್ಪಾ ಶಿವಗಣ ಚಕ್ರದ ಮಧ್ಯದಿ
ಸರ್ಪಾಭರಣವ ಧರಿಸಿದ ಚಲುವನ ಧ್ಯಾನದೊಳೆಂದಿಹೆನೋ ೨

ಜಗದಗಲದ ಶಶಿಕಾಂತದ ವೇದಿಕೆ
ಮುಗಿಲುದ್ದದ ಮಾಣಿಕ್ಯದ ಕಂಬದಿ
ಬಿಗಿದಿಹ ನೀಲದ ತೊಲೆಗಳು ಒಪ್ಪುವ ಮಣಿಮಂಟಪದೊಳಗೆ
ಹಗಲಿರುಳೆನ್ನದೆ ತುಂಬಿಹ ಮುನಿಗಳು
ಉಘೆ ಯುಘೆ ಜಯ ಜಯ ಘೋಷದ ಮಧ್ಯದಿ
ಸೊಗಸುತ್ತಿರುತಿಹ ನಗಜೆಯ ರಮಣನ ಧ್ಯಾನ
[ದೊಳೆಂದಿಹೆನೋ ೩

ಹರಿಯಜ ಸುರದೇವೇಂದ್ರರ ಯಕ್ಷರ
ಗರುಡೋರಗ ಸುರಗಂಧರ್ವಾಸುರ
ವರ ಕಿನ್ನರ ಕಿಂಪುರುಷರ ಸಿದ್ಧರ ಸಾಧ್ಯರ ಯೋಗಿಗಳ
ಸುರುಚಿರ ವರಮಣಿಮಕುಟದ ಬೆಳಗಿಂ
ತೆರಹಿಲ್ಲದ ಕಲಕಲರವದೋಲಗ-
ದಿರುವಿನ ಮಧ್ಯದೊಳೊಪ್ಪುವ ಪರಶಿವಧ್ಯಾನದೊಳೆಂದಿಹೆನೋ ೪

ಝಗಝಗಿಸುವ ಶಶಿಸೂರ್ಯರ ಬೆಳಗಿಂ
ಮಿಗೆ ದೇವರ್ಕಳ ಮಕುಟದ ಬೆಳಗಿಂ
ಸೊಗಸೊಗಸುತಲಿಹ ರತ್ನದ ಓಲಗಶಾಲೆಯ ತೇಜದೊಳು
ಗಗನದ ಕಕುಭಂಗಳನುರೆ ತೀವಿದ
ಹಗಲಿರುಳೆನ್ನದೆ ಓಲಗದೊಳಗಿಹ
ನಗೆಮೊಗಧಾ ಸುಷಡಕ್ಷರಲಿಂಗದ ಧ್ಯಾನದೊಳೆಂದಿಹೆನೋ ೫

* * *

## ಎನ್ನಪರಾಧವ ನೋಡದೆ ರಕ್ಷಿಸು

ರಾಗ : ದೇಶಾಕ್ಷಿ

ಎನ್ನಪರಾಧವ ನೋಡದೆ ರಕ್ಷಿಸು
ಪನ್ನಗಧರ ವರಮೂರ್ತಿ ಕೃಪಾಕರ
ಚೆನ್ನ ಷಡಕ್ಷರಿಲಿಂಗವೆ ಎನಗೊಲಿದೊಮ್ಮೆಗೆ ಕೃಪೆಯಾಗು ॥ಪ॥

ಖುಲ್ಲನು ಕ್ಷುದ್ರನು ಪರರಿಭಿಮಾನಕೆ
ಭುಲ್ಲವಿಸುವಖಿಲ ಕಪಟಾತ್ಮಕ ಬಹು
ಸುಳ್ಳನು ಕಳ್ಳರ ಮೇಳಾಪನು ಮನ ತಲ್ಲಣಿಸದೆ ಪಾಪ-
ವೆಲ್ಲನು ಮಾಡುವ ದುರ್ಜನ ದುರ್ಮುಖ-
ನಿಲ್ಲದೆ ಸತ್ಪುರುಷರ ನಿಂದಿಸುತಿಹ
ಖುಲ್ಲಾತ್ಮಕನವಗುಣಗಳ ನೋಡದೆ ಒಮ್ಮೆಗೆ ಕೃಪೆಯಾಗು ೧

ಕನ್ಯಾರ್ಥವ ಪತಿಕರಿಸುತ ಭೂಮಿಯ
ಮನ್ನಣೆಯಳಿದಿಹ ದಾಸಿಯ ದುಷ್ಕುಲ
ವೆನ್ನದೆ ವರ್ತಿಪ ಶಿಶ್ನಪರಾಯಣ ಕಾಮುಕನಜ್ಞಾನಿ
ಸನ್ನುತ ಗುರು ಚರ ವಾಕ್ಯವ ಮೀರಿಯೆ
ಭಿನ್ನವ ಮಾಡಿ ಶಿವಾಗಮ ಶಾಸ್ತ್ರಗ-
ಳೆನ್ನದೆ ಮುಂದಣ ಸದ್ಗತಿಯರಿಯೆನು ಒಮ್ಮಿಗೆ ಕೃಪೆಯಾಗು ೨

ಈಕ್ಷಿಸಲೊಲ್ಲದೆ ಲಿಂಗವ ವನಿತಾ
ವಕ್ತ್ರೋಜಾನನ ಕಟಿ ಪೊರೆವಾರವ-
ನೀಕ್ಷಿಪಪೇಕ್ಷಾ ತಾಮಸದಿಂದತಿ ಮತಿ ಮಸಳಿಸಿತಡಗಿ
ಲಕ್ಷಿಸಲೊಲ್ಲದೆ ಹಿರಿಯರ ವಚನವ
ಭಕ್ಷಣೆಗೋಸುಗ ಡಂಭಕ ರೂಪನು
ಮೋಕ್ಷವನರಿಯದ ಗುಪ್ತದ್ರೋಹಿಗೆ ಒಮ್ಮಿಗೆ ಕೃಪೆಯಾಗು ೩

ಖೂಳನು ಪಾಪಿಷ್ಠನು ದುಷ್ಟರ ಭವಿ-
ಮೇಳನು ಹಿಂಸೆಗೆ ಹೆದರದೆ ಹಿರಿಯರ
ಝೂಳಿಸಿ ನುಡಿದಪಕೀರ್ತಿಯ ಒಡಲಿನ ಕಾಕು ವಿಚಾರನಿಗೆ
ಢಾಳಕತನದಲಿ ವಾಗ್ಜಾಲದೊಳತಿ
ಕಾಲನ ಬಾಧೆಗೆ ಬಿದ್ದು ಪುನರ್ಭವ-
ಮಾಲೆಯ ಕೊರಳಿಗೆ ತೊಡರಿಸಿಕೊಂಬನಿಗೊಮ್ಮಿಗೆ
[ಕೃಪೆಯಾಗು ೪

ಹೀನನು ಬಹುಮುಖ ಶಾಸ್ತ್ರವ ಕಲಿತನು
ಜ್ಞಾನವ ಮಾನಿಗಳು ಧಿಕ್ಕರಿಸುವ
ನಾನಾ ಕೃತ್ಯವನೆಸಗಿ ಗುರೂನ್ನತನಾಗದೆ ಭವಭವದ
ಕಾನನದೊಳು ಕಣ್ಗಾಣದೆ ತಿರುಗುವ
ವಾನರನಂತೆ ಪರಾಪರ ಮುಕ್ತಿಯ-
ನೇನೆಂದರಿಯದ ಬಹು ಮುಖ ಜಡನಿಗೆ ಒಮ್ಮಿಗೆ
[ಕೃಪೆಯಾಗು ೫

ಸುರಪಶುವಿಗೆ ಗೊಡ್ಡಾವಿನ ಸಂಗವೆ
ಸುರತರುವಿದ್ದಂತೆಲುವದ ಮರನಂ
ವರಚಿಂತಾಮಣಿಯಿರುತಿರೆ ಗಾಜಿನ ಚಟಿಕೆಯ ಹಿಡಿವಂತೆ
ಹರಮಂತ್ರದ ಪಂಚಾಕ್ಷರಿಯಿರುತಿರೆ
ಪರಿಪರಿ ಕೃತಕದ ಮಂತ್ರವ ಬಯಸುತ
ನರರುಗಳಂದದಿ ನಿರಯಕೆ ಬೀಳ್ವನಿಗೊಮ್ಮಿಗೆ ಕೃಪೆಯಾಗು ೬

ಅವಗುಣಗಳನಿನ್ನಾರಿಗೆ ಹೇಳಲಿ
ಶಿವೆ ಗುರು ವಾಕ್ಯವ ಮೀರಿದ ಕಾರಣ
ಶಿವನೊಲಿಯನು ಶಿವನೊಲಿಯದಿರಲು ಶಿವಶರಣರು [ಒಲಿಯರಲಾ
ಭವ ಹೀಗಾದರೆ ಯೆಂದಿಗೆ ಬಿಡುವದು
ಶಿವೆಯಾನಂದದಯಾಂಬುಧಿ ಭವಗಿರಿ-
ಪವಿಯೇ ರಕ್ಷಿಸು ಕೊರತೆಯದಾರಿಗೆ ಒಮ್ಮಿಗೆ ಕೃಪೆಯಾಗು ೭

ತಂದೆಯ ಮಾತನು ಮೀರಲು ಶಿಕ್ಷೆಯು
ಒಂದಾದಡೆ ಉಂಟಲ್ಲದೆ ಸದ್ಗುರು
ತಂದೆಯ ಮಾತನು ಮೀರಲು ಶಿಕ್ಷೆಯು ಎಂದಿಗು ಉಂಟಷ್ಟೆ
ಮುಂದಾ ಸದ್ಗುರುವಿಂದಲ್ಲದೆ ಶಿವ-
ನಿಂದಾದೊಡೆ ಶಿಕ್ಷೆಯು ತಾನಹುದಾ-
ನಂದ ದಯಾಪರ ಸಿಂಧುವೆ ಹರನೇ ಒಮ್ಮಿಗೆ ಕೃಪೆಯಾಗು ೮

ಸುರಭನು ತೃಣಕಣ ಮರುತನ ಜ್ಯೋತಿಯ
ಯಿರವತಿ ಸಂಧ್ಯಾರಾಗವುಜ್ವಲಿಸಿರೆ
ಕರಿಶುಂಡಾಲದ ಶಿಶುವಸಿಧಾರೆ ಗೆಯೊಡ್ಡಿದ ಕುರಿಯೆಂದು
ಅರಿದರಿದೀ ತನು ನಿತ್ಯವೆನುತ್ತಲಿ
ಹರಿಯಜ ಸುರ ಮನುಮುನಿಗಳು ಕೆಟ್ಟ್ರಾ
ಪರಿಯಲಿ ವ್ಯರ್ಥದಿ ನಾ ಕೆಡಲಾರೆನು ಒಮ್ಮಿಗೆ ಕೃಪೆಯಾಗು ೯

ಮೇರುವ ಸಾರುವ ವಾಯುಸ ಕನಕಶ-
ರೀರಮದಾಗಿರದಾರಿಗೆ ಪರುಷವು
ಸೇರಿದ ಕಬ್ಬಿಣದವಗುಣವಳಿಯದದಾರಿಗೆ ಕೊರತೆಯದು
ಬಾರದ ತಿಳುಹದದಾರೈಯೆಡರದು
ಸೂರಿಯನುದಯದಿ ಕಮಲವು ಮುಗುಳಿರೆ
ಸೇರಿದ ಕೊರತೆಯದಾರಿಗೆ ಶಿವ ನೀನೊಮ್ಮೆಗೆ ಕೃಪೆಯಾಗು ೧೦

ತರುಗಳ ಗುಣಗಳ ನೋಡಿತೆ ಚಂದನ
ಪರುಷವು ಲೋಹದ ಅವಗುಣವರಸಿತೆ
ಅರಿಯಿತೆ ಕಂಟಕಗುಣವನು ಭ್ರಮರವು ಆ ಪರಿಯಿಂದವಲಿ
ಬರಿಯವಗುಣಿಯಲಿ ಸದ್ಗುಣವರಸದೆ
ಪರಮ ಚಿದಂಬುಧಿಯುದ್ಭವಯನಘಹರ
ಗುರುವೆ ಷಡಕ್ಷರಿ ಲಿಂಗವೆ ಎನಗೊಲಿದೊಮ್ಮೆಗೆ
[ಕೃಪೆಯಾಗು ೧೧

ಎನ್ನ ತಪ್ಪು ಅನಂತ ಕೋಟಿ. ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ. ಕೂಡಲ ಸಂಗಮ ದೇವಯ್ಯ ನಿಮ್ಮ ಪ್ರಮಥರ ಮುಂದೆ ಕಿನ್ನರಿಯ ಬೊಮ್ಮಣ್ಣನೇ ಸಾಕ್ಷಿ. —ಬಸವಣ್ಣನವರು

* * *

# ಯುಗವನಂತವು ಹಿಂಗುತಿವೆ

ರಾಗ : ಹಿಂದೂಳ ವಸಂತ

ಯುಗವನಂತವು ಹಿಂಗುತಿರುತಿಹವು ಅವರಲ್ಲಿ
ಜಗವನಾಳಿದ ರಾಯರುಗಳು ಹೋದರು ಕೆಲರು
ಮಿಗೆ ದನುಜ ಮನುಜರವಧಿಗಳಿಲ್ಲದಮರಗಣ
ಸುರಸಿದ್ಧರುಗಳಳಿದರು ॥ಪ॥

ಆನಂದ ಸ್ವೇದಜಂ ತಾನುಂ ಜರಾಯುಜಂ
ಏನೆಂಬೆನಂಡಜಂ ಬೀಜಜಂ ಯುಗ ಮುಂದೆ
ನೀ ನೋಡು ಭಿನ್ನ ಯುಕ್ತಾಯುಕ್ತವೆ ಮದಾಯು
ಮನ್ಯರಣ ಮಾನ್ಯರಣವು
ನೂನಯುಗ ವಿಶ್ವರಾಜ್ಞಾ ಕಾಲಸಮ್ಮಿತಂ
ನೀನು ತಿಳಿ ಕೃತ ತ್ರೇತ ದ್ವಾಪರಂ ಕಲಿಯುಗಂ
ತಾನು ತಿರುತಿರುಗಿ ಮರಮರಳಿ ಹೋಗುತ್ತಿಹವು
ಮೂಢರಿವಗಳನರಿಯರು ೧

ಆದಿ ಮನುವಿಂದ್ರನು ಕಾಲಸ್ಥಲಂ ದುಂಧು
ಮಾದಿರೇಶಂಬುಸುತ ಹರಿಶ್ಚಂದ್ರ ರೋಹಿತಂ
ಆದಿನಳ ಕೃಪ ಚ್ಯವನ ಪುರುರವಸುಗಳಿಂ ಪರೀ ತಾ
ಪ್ರಿಯವರನಿಂದ
ಭೂಧವಂ ಮಾಂಧಾತನಾ ಭಗೀರಥನಾದಿ
ಯಾದ ಪರಿತಾಪಿಯಾಗಿರುವ ಗೋಪಾಲ ತಾ-
ನಾದಿಯಹ ನಂದ ಗೋಪಾಲ ವಸುದೇವ ಶ್ರೀಕೃಷ್ಣಾದಿಗಳು
ಅಳಿದರು ೨

ತಾಳಾಸುರಂ ಪಂಚ ಮೇಢ್ರಾಸುರಂ ವ್ಯಾಘ್ರ
ಲಾಳಾಸುರಂ ಶಕಟ ವಿಕಟಾಸುರಂ ನರಕ
ವ್ಯಾಳಾಸುರಂ ಕಾಕ ಮೂಕಾಸುರಂ ರಾವಣಂ ಸೋಮ
ಕಾಸುರಕನು
ಜ್ವಾಲಾಸುರಂ ರಕ್ತಬೀಜಾಧರಂ ನಮುಚಿ
ಕಾಳಾಧರಂ ಬಲಿಯು ದೇವಾಂತಕಂ ಜಂಭ
ಜಾಳಂಧರಂ ಭಸ್ಮ ದೇವಾಸುರಂ ಮುಖ್ಯವಾಗಿರ್ದ
ಸುರರಳಿದರು ೩

ಗೋರಟಂ ಚರ್ಪಟಿಯು ರತ್ನಗೋಪಂ ವ್ಯಾಳಿ
ಧೀರ ಮಧ್ಯಾಂಧ್ರ ನಾಗಾರ್ಜುನಂ ಖರ್ಪರಂ
ಧಾರುಣಿಯೊಳಳಿದರೀ ಮನದಿಚ್ಛೆಮರಣ ದ್ರೌ ದ್ರೋಣ
ಭೀಷ್ಮರು ಅಳಿದರು
ವಾರಿಜಾಕ್ಷಂ ವಾರಿಜೋದ್ಭವಂ ಮೊದಲಾದ
ಸೂರೀಂದ್ರ ನಿರ್ಜರರು ಯಕ್ಷ ಕಿನ್ನರ ಗರುಡ
ಮಾರುತಾಪನನವರು ಈರೇಳು ಲೋಕದೊಳಗಳಿದರುಳಿದರ
ಕಾಣೆನು ೪

ಇವರ ಮಾತಂತಿರಲಿ ಔದುಂಬರದ ವೃಕ್ಷ
ತವೆ ಕಾಲಕಾಲಕ್ಕೆ ಫಲದೋರಿಯಳಿವಂತೆ
ಶಿವನೊಳಗೆ ಬ್ರಹ್ಮಾಂಡ ಕೋಟಿಗಳು ಬಗೆದೊಗೆದು
ತೋರಿಯಡಗುತಲಿರ್ಪವು
ಭವರಹಿತ ಮಲಮಾಯೆಗಳ ರಹಿತ ಫಲರಹಿತ
ಶಿವಗಣಂಗಳು ನಿತ್ಯಸುಖದೊಳಿರುತಿಹರು ಗಡ
ಶಿವಷಡಕ್ಷರಲಿಂಗದೊಳಡಗಿ ಹೊರಗಿನಳಿವುಗಳಾವುಳಿವುಗಳಂ
ನೋಡುತಿಹರು ೫

* * *

# ದೇವತ್ವವಾವುದು

ರಾಗ : ದೇಶಿ

ದೇವತ್ವವೆಂಬುದದಾವುದೆಂದರಿಯರು ಕೇಳು ಮನವೆ
ಭಾವದೊಳು ಲಿಂಗ ನೆಲಸಿರೆ ದೇವತ್ವವಪ್ಪುದು
ಕೇಳು ಮನವೆ ॥ಪ॥

ಉರಿವ ಕಿಚ್ಚನೆ ಹೊಕ್ಕು ಬೇಯದೆ ಹೊರಟರೆ ಕೇಳು ಮನವೆ
ನರರುಗಳದನು ದೇವತ್ವವೆಂದೆಂಬರು ಕೇಳು ಮನವೆ
ಭರದಿಂದ ಬಂದು ಹೊಳೆಯು ಮೇಲೆ ನಡೆದರೆ ಕೇಳು ಮನವೆ
ಅರರೆ ಅವರಾಚರಿಸಿದುದೇ ದೇವತ್ವವೆಂಬರು ಕೇಳು ಮನವೆ ೧

ಚಿತ್ತದೊಳಿಹ ಮಾತು ಹೇಳಲು ಕೇಳುತ ಕೇಳು ಮನವೆ
ಸತ್ಯವಿದತಿಶಯ ದೇವತ್ವವೆಂಬರು ಕೇಳು ಮನವೆ
ಹತ್ತಿ ಗಗನದಲ್ಲಿ ನಡೆದರೆ ಧರೆಯೊಳು ಕೇಳು ಮನವೆ
ಉತ್ತರೋತ್ತರ ದೇವತ್ವವೆಂಬರು ಕೇಳು ಮನವೆ ೨

ದೂರ ದೃಷ್ಟಿ ದೂರ ಶ್ರವಣಗಳಿಂದಲಿ ಕೇಳು ಮನವೆ
ಸಾರಿ ದೃಷ್ಟವ ಹೇಳೆ ದೇವತ್ವವೆಂಬರು ಕೇಳು ಮನವೆ
ಆರೈವ ಮನದಿ ಷಡಕ್ಷರ ಲಿಂಗವ ಕೇಳು ಮನವೆ
ಬೇರಿಲ್ಲದೊಡಗೂಡ ಬಲ್ಲರೆ ದೇವತ್ವ ಕೇಳು ಮನವೆ ೩

* * *

# ತನ್ನ ನಾವು ಏನು ಬೇಡಿದೆವು

ರಾಗ : ದೇಶಿ

ಎನ್ನ ಕರದೊಳಗಿರ್ದು ಎನ್ನೊಳು ನುಡಿಯನು ಕೇಳು ಸಖಿಯೆ
ತನ್ನ ನಾವು ಏನು ಬೇಡಿದೆವವ್ವ ಕೇಳು ಸಖಿಯೆ ॥ಪ॥
ಸಾಲೋಕ್ಯಮೊದಲಾದ ನಾಲ್ಕು ಪದಂಗಳು ಕೇಳು ಸಖಿಯೆ
ಮೇಲೆ ನಮ್ಮವರ ಬಾಗಿಲ ಕಾಯ್ದಿರ್ಪವು ಕೇಳು ಸಖಿಯೆ
ಲೀಲೆಯಿಂದಲವನು ಬೇಡುವನಲ್ಲ ತನ್ನನು ಕೇಳು ಸಖಿಯೆ
ಭಾಳಾಕ್ಷ ನಮ್ಮೊಳು ನುಡಿಯದನೆ ಕೇಳವ್ವ ಕೇಳು ಸಖಿಯೆ ೧

ಅಣಿಮಾದಿ ಅಷ್ಟಸಿದ್ಧಿಗಳ ನಮ್ಮವರೆಲ್ಲ ಕೇಳು ಸಖಿಯೆ
ತೃಣಮಾತ್ರ ಲೆಕ್ಕಿಸಿ ಬಗೆಯರು ಮನದೊಳು ಕೇಳು ಸಖಿಯೆ
ಅಣಿಮಾದಿ ಸಿದ್ಧಿಗಳನು ಬೇಡಿದೆವೆ ತನ್ನ ಕೇಳು ಸಖಿಯೆ
ತ್ರಿಣಯ ತಾ ನಮ್ಮೊಳು ನುಡಿಯನದೇಕವ್ವಕೇಳು ಸಖಿಯೆ ೨

ಅರವತ್ತುನಾಲ್ಕು ವಿದ್ಯೆಯು ನಮ್ಮ ಶರಣರು ಕೇಳು ಸಖಿಯೆ
ಚರಣರಕ್ಷೆಗೆ ಸರಿಯಬಾರವವೆಲ್ಲವು ಕೇಳು ಸಖಿಯೆ
ಅರವತ್ತುನಾಲ್ಕು ವಿದ್ಯೆಯ ಬೇಡಿದೆವೆ ತನ್ನ ಕೇಳು ಸಖಿಯೆ
ಹರನು ತಾ ನಮ್ಮೊಳು ನುಡಿಯದಿರ್ಪುದೇಕವ್ವ ಕೇಳು ಸಖಿಯೆ ೩

ಹೊಟ್ಟೆಗನ್ನವನಿಕ್ಕಿದಳು ನಮ್ಮ ಪಿಟ್ಟವ್ವೆ ಕೇಳು ಸಖಿಯೆ
ಉಟ್ಟುಕೊಂಬಡೆ ನಮ್ಮ ದಾಸಯ್ಯ ಬಟ್ಟೆ ಕೊಟ್ಟನು ಕೇಳು ಸಖಿಯೆ
ಕೊಟ್ಟರು ತನಗೆ ಬೇಡಿದುದನ್ನೆಲ್ಲ ಶರಣರು ಕೇಳು ಸಖಿಯೆ
ಕೊಟ್ಟನೋ ಹರ ನಮ್ಮವರಿಗೆ ನುಡಿಯನು ಕೇಳು ಸಖಿಯೆ ೪

ಆದವರನು ಮರೆದನು ತನ್ನೊಳು ಕೇಳು ಸಖಿಯೆ
ಭೇದಿಸಿ ತನ್ನೊಳಗಿಲ್ಲದೆ ಕೇಳು ಸಖಿಯೆ
ನಾದಮಾಯನು ಶಿವಷಡಕ್ಷರಿ ಲಿಂಗವು ಕೇಳು ಸಖಿಯೆ
ವೇಧಿಸಿ ನಮ್ಮೊಳು ನುಡಿಯನದೇಕವ್ವ ಕೇಳು ಸಖಿಯೆ ೫

* * *

# ಮೋಹವಿಲ್ಲದ ಪೂಜೆ

## ರಾಗ : ದೇಶಿ

ಮೋಹವಿಲ್ಲದ ಪೂಜೆಯೆನಿಸು ಕಾಲಗಳಿಂದ ಕೇಳು ಮನವೆ
ದೇಹಿಗೆ ತಾ ಮಾಡಿ ಫಲವೇನು ಅದರಿಂದ ಕೇಳು ಮನವೆ ॥ಪ॥

ಹಸಿಯುಗೋಡೆ ಹರಳಿಂದಲಿಡಲು ಕೇಳು ಮನವೆ
ಮಸೆದ ಕೂರಲಗಿಂದ ಬಾಳೆಯನು ಎಚ್ಚಂತೆ ಕೇಳು ಮನವೆ
ಒಸೆದು ಲಿಂಗವ ನೋಡಿದಾಕ್ಷಣ ಬೇಗವು ಕೇಳು ಮನವೆ
ಬೆಸುಗೆಗಳಿಲ್ಲದ ಮೋಹವದೇತಕೆ ಕೇಳು ಮನವೆ ೧

ಪುರುಷನಂಗಾಂಗವ ಬಯಸುವ ಲಲನೆಯು ಕೇಳು ಮನವೆ
ಪರಿಮಳದರಳಿಗೆ ಭ್ರಮರನೆಳಸುವಂತೆ ಕೇಳು ಮನವೆ
ಪರಮಭೇದ ಲಿಂಗ ಕರದೊಳಗಿರುತಿರೆ ಕೇಳು ಮನವೆ
ಪರರೆಣಿಸದು ಚಿತ್ತವೇತರ ಮೋಹವು ಕೇಳು ಮನವೆ ೨

ಬಿಸಿಯಾದ ಹಾಲೊಳು ಮುಸುಡಿಕ್ಕಿದ ಬೆಕ್ಕು ಕೇಳು ಮನವೆ
ಸಸಿನೆ ಕಾಣುತ ಕೊಡರಾಡುವ ತೆರನಂತೆ ಕೇಳು ಮನವೆ
ನುಸುಳುವ ಚಿತ್ತವ ಬಲುಹಿಂದ ಪಿಡಿತಂದು ಕೇಳು ಮನವೆ
ಶಶಿಧರನೊಳಗಿಡದೇತರ ಮೋಹವು ಕೇಳು ಮನವೆ ೩

ಸವತಿಯ ಶಿಶು ಹಸಿದಳುತಿರೆ ಸವತಿಯು ಕೇಳು ಮನವೆ
ಜವನೂರನಡಿಗೆಗೆ ಮೊಲೆಯೂಡುವಂದದಿ ಕೇಳು ಮನವೆ
ಶಿವಲಿಂಗವನು ನೋಡಿ ಕರದಲ್ಲಿ ಚಿತ್ತಕ್ಕೆ ಕೇಳು ಮನವೆ
ಭವಕಂಜಿ ನೆನೆದರದೇತರ ಮೋಹವು ಕೇಳು ಮನವೆ ೪

ಬಿಡದೆ ಜಾರನು ಜಾರೆ ಕಣ್ಮರೆಯಾದರೆ ಕೇಳು ಮನವೆ
ತಡೆಯದೋಡುವಾನಂದದೊಳು ಚಿತ್ತವು ಕೇಳು ಮನವೆ
ಮೃಡ ಷಡಕ್ಷರಲಿಂಗವನು ಕಾಣುತಾಕ್ಷಣ ಕೇಳು ಮನವೆ
ಬಿಡಿಸಿದಂದದಿ ತೊಡರದ ಮೋಹವೇತಕ್ಕೆ ಕೇಳು ಮನವೆ ೫

* * *

## ಬಂದನು ಮರ್ತ್ಯಕೆ

ರಾಗ : ದೇಶಿ

ಬಂದನು ಮರ್ತ್ಯಕಿನ್ನುದ್ಧಾರವನು ಮಾಳ್ಪ
ಇಂದುಧರ ಓಂ ನಮಃ ಶಿವಾಯೆಂಬ ನಾಮದಲಿ ॥ಪ॥

ಮುಖವೈದನೆ ಏಕಮುಖವನೆ ಮಾಡುತಲಿ
ಶಿಖಿನೇತ್ರ ಗುಪ್ತತರವಾಗಿ ರಂಜಿಸಲು
ಆಕಳಂಕ ದಶಭುಜ ದ್ವಯಭುಜದೊಳುಂ ಮರೆಸಿ
ಮಕರಧ್ವಜನ ಸುಟ್ಟು ಭಸಿತವನೆ ಧರಿಸಿ ೧

ರುಂಡಮಾಲೆಯ ಬಿಟ್ಟು ರುದ್ರಾಕ್ಷಿಗಳ ಧರಿಸಿ
ಚಂಡಶೂಲವನಳಿದು ಸುಜ್ಞಾನವಿಡಿದು
ಮಂಡೆಯೊಳು ಪೊತ್ತ ಚಂದ್ರಮನ ಶಾಂತಿಯೊಳಿಟ್ಟು
ಕುಂಡಲದ ಫಣಿಯ ಧರೆಗಿಳುಹಿಯಳವಟ್ಟು ೨

ಹರಿಗೆ ಹೇಳದೆ ಸರಸಿಜೋದ್ಭವಗೆ ಸೂಚಿಸದೆ
ವರವೀರ ಪ್ರಮಥರಿಗೆ ಸನ್ನೆಮಾಡಿ
ನರಲೋಕ ನಾಟಕವ ನೋಡಬೇಕೆಂದೆನುತ
ಸರಸದಿಂ ಬಂದಂ ಷಡಕ್ಷರಿಯದೇವ ೩

* * *

# ಆರು ಕಾಣರು ಪುಣ್ಯಕ್ಷೇತ್ರವನು

ರಾಗ : ಧನ್ಯಾಸಿ

ಧಾರುಣಿಯನು ತಿರುಗುವರ್ಸೆ-ಅಲ್ಲಿ
ಆರು ಕಾಣರು ಪುಣ್ಯಕ್ಷೇತ್ರವನು ॥ಪ॥

ಗಗನಗಿರಿಯ ಶಿಖರದ ಮೇಲೆ-ಅಲ್ಲಿ
ಸೊಗಸುವ ರತ್ನ ಮಂಟಪದೊಳು
ಝಗಝಗಿಸುವ ಶಶಿಸೂರ್ಯ ಪ್ರಭೆ-ಅಲ್ಲಿ
ಅಗಲದೆ ಬೆಳಗುವ ತೇಜ ೧

ತಂಬು ಕಿನ್ನರಿ ನಾಗಸರ ವೀಣೆ-ಅಲ್ಲಿ
ಝೇಂಕರಿಸುವ ಘಂಟೆ ಜಾಗಟೆ
ಕಿಂಕಿಣಿ ಭೇರಿ ದುಂದುಭಿ-ಅಲ್ಲಿ
ಓಂಕಾರನಾದವಾಗುತ್ತಿದೆ ೨

ತೊಳಗುವ ಚಂದ್ರಾರ್ಕ ಮಿಂಚಿನ ಕೋಟಿ
ಬೆಳಕಿಂದ ಸಕಲವು ಬೆಳಗುತ್ತ
ಒಲಿದ ಷಡಕ್ಷರ ಲಿಂಗವು-ಅಲ್ಲಿ
ನೆಲಸಿರ್ಪ ಭೇದವನರಿಯುದೆ ೩

* * *

## ಕಾಯ್ಯೊ ಕಾಯ್ಯೊ

ರಾಗ : ಧನ್ಯಾಸಿ

ಕಾಯ್ಯೊ ಕಾಯ್ಯೊ ಕರುಣದಿ ನಾನು
ನಾಯಲಾರೆನು ಮಾಯು ಕೈಯಲಿ ||ಪ||

ಹರಿಯಜ ಸುರ ಮನು ಮುನಿಗಳು ಹಿಮ
ಗಿರಿಯ ಮರೆಯೊಳಡಗಿ ಕೊಂಡಿರೆ
ಗಿರಿಯು ಮರೆಯೊಳಿರಲಾರದೆ ನಿಮ್ಮ
ಚರಣರಕ್ಷೆಯ ಮರೆಯನು ಹೊಕ್ಕೆ ೧

ಆಶೆಯ ಪಾಶದಿಂದಲಿ ಕಟ್ಟಿ ಮಾಯೆ
ವಾಸವಾದಿಗಳನು ಕೊಲುತಲಿದೆ
ಆಶಾಪಾಶದೊಳಿರಲಂಜಿ ಜಗ
ದೀಶ ನಿಮ್ಮನು ಮರೆಯ ಹೊಕ್ಕೆ ೨

ಬಲುಹಿರಿಯುರನ್ನು ಕೊಲುತಿದೆ ಮಾಯೆ
ಗೆಲುವವರಿಲ್ಲ ತ್ರಿಜಗದೊಳು
ಅಲಸಿ ನಿಮ್ಮನು ಮರೆಯ ಹೊಕ್ಕೆ ಎನ್ನ
ಸಲಹು ಷಡಕ್ಷರಿಯ ಲಿಂಗವೆ ೪

* * *

# ನಮ್ಮ ದೇಶಕೆ ಹೋಹದಿನ ಬಂತು

ರಾಗ : ಧನ್ಯಾಸಿ ತೋಡಿ

ನಮ್ಮ ದೇಶಕೆ ಹೋಹ ದಿನ ಬಂತು ಮುಂದೆ
ಗಮ್ಮನೆಲ್ಲರನೊಬ್ಬುಳಿಮಾಡು ॥ಪ॥

ಅಂಗಭೋಗಂಗಳ ಮರೆ ನೀನು ಮುಂದೆ
ಹೆಂಗಳ ಸುಖವನು ತೊರೆ ನೀನು
ಅಂಗಜ ಗುಣಗಳ ಹರಿ ನೀನು ಮುಂದೆ
ಲಿಂಗವ ಮನದೊಳಗರಿ ನೀನು ೧

ಮಲತ್ರಯದಾಸೆಯ ಬಿಡು ನೀನು ಮುಂದೆ
ಹಲವು ಬುದ್ಧಿಗಳನು ತೊಡೆ ನೀನು
ಫಲಿಸದ ವೃಕ್ಷವನು ಕಡಿ ನೀನು ಮುಂದೆ
ಸಲೆ ಲಿಂಗದೊಳು ಮನವಿಡು ನೀನು ೨

ಬಿಡು ತನುವಿನ ಮೇಲಣಾಸೆಯನು ಮುಂದೆ
ಹಿಡಿ ಶಿವಶರಣರ ಭಾಷೆಯನು
ಮೃಡಷಡಕ್ಷರಾಧೀಶನನು ಮುಂದೆ
ಯೊಡಗೂಡು ಭವಪಾಶನಾಶನನು ೩

* * *

# ಸೆರಗನೊಡ್ಡಿ ಬೇಡಿಕೊಂಬೆನು

ರಾಗ : ಲಹರಿ — ತಾಳ : ಅಟ

ಸೆರಗನೊಡ್ಡಿ ಬೇಡಿಕೊಂಬೆನು-ಶಿವ ಶಿವಾ
ಮರೆದು ಹೋಗಬೇಡವೆನ್ನನನು-ಶಿವ ಶಿವಾ ॥ಪ॥

ನಿನ್ನ ಕರೆದು ಎನಗೆ ಕೊಟ್ಟರು ಗುರುಸ್ವಾಮಿ
ಎನ್ನ ಕರೆದು ನಿಮಗೆ ಕೊಟ್ಟರು
ತನ್ನ ಮಾತ ಮೀರಬೇಡವೆಂದು ಗುರುಸ್ವಾಮಿ
ಎನ್ನ ನಿನ್ನನೊಂದುಗೂಡಿದ ೧

ತಪ್ಪನೆನ್ನ ಮೇಲೆ ಹೊಂದಿಸಿ-ಶಿವ ಶಿವಾ
ತಪ್ಪಿಸೆನ್ನ ಬಿಟ್ಟು ಹೋದರೆ
ಒಪ್ಪರಯ್ಯ ಗುರುವಿನಾಜ್ಞೆಗೆ-ಶಿವ ಶಿವಾ
ತಪ್ಪಿನಡೆವರೆಂದು ನಮ್ಮನು ೨

ಎನ್ನನೊಲ್ಲದಿದ್ದೊಡೆ ನೀನು-ಶಿವ ಶಿವಾ
ಎನ್ನ ಮುನ್ನದೇಕೆ ಕೂಡಿದೆ
ಎನ್ನ ಬಿಡುವೆನೆಂದೊಡೆ ನೀನು-ಶಿವ ಶಿವಾ
ನಿನ್ನ ಬಿಡೆನು ಗುರುವಿನಾಜ್ಞೆಗೆ ೩

ನೋಡಬೇಡ ಎನ್ನ ಗುಣವನು-ಶಿವ ಶಿವಾ
ಕೂಡಿ ಅಗಲಬೇಡವೆನ್ನನು
ಬೇಡಿಕೊಂಬೆ ನಾನು ನಿಮ್ಮನು-ಶಿವ ಶಿವಾ
ನೋಡು ನಿಮ್ಮ ಕರುಣ ದೃಷ್ಟಿಯಲಿ ೪

ಕಂಗಳಿರದ ಕುರುಡನಂದದಿ-ಶಿವ ಶಿವಾ
ಭಂಗಬಡುತೆ ತಿರುಗುತಿರುವೆ
ಹಿಂಗದೆ ಷಡಕ್ಷರಾಂಕನೆ-ಶಿವ ಶಿವಾ
ಲಿಂಗ ನಿಮಗೆ ಕೊರತೆಯಿಲ್ಲವು ೫

ಜಲವ ತಪ್ಪಿದ ಮತ್ಸ್ಯ ಬದುಕುವದೆ ಸೋಜಿಗ. ಗಣತಿಂಥಿಣಿಯೊಳಗಿರಿಸೆನ್ನ ಲಿಂಗವೆ. ಶಿವ ಶಿವಾ ಕೂಡಲ ಸಂಗಮದೇವ ಸೆರಗೊಡ್ಡಿ ಬೇಡುವೆ.

—ಬಸವಣ್ಣನವರು

* * *

# ತಂದು ತೋರೆ

ರಾಗ : ಮಲಹರಿ

ತಂದು ತೋರೆ ಎನ್ನ ಮನಘನ ಪ್ರಿಯನ
ಇಂದುಧರ ಕಡು ಚಲ್ವ ಮನದತ್ತ ಸುಳಿಯನು ॥ಪ॥

ಪುಲಿಯಚರ್ಮದುಡಿಗೆಯವನ ಸುಲಿಪಲ್ಲ ಚಲುವನ
ಪೊಳೆವ ಫಣಿಕುಂಡಲದ ನೀರನ
ಒಲಿಸುವರಿಗೆ ಮುನ್ನ ಒಲಿಸುವ ತವಕಿಯು
ಒಲಿದೆನ್ನ ಮನದತ್ತ ಸುಳಿಯನು ಕೆಳದಿ ೧

ಹೃದಯ ಕೋಣೆಗಳಲ್ಲಿ ಮನದ ಮಂಚವ ಹಾಸಿ
ಪದುಳದಿ ಭಾವದ ಗುಡಿಯುಗಟ್ಟಿದೆ
ಸದಮಲ ಜ್ಞಾನಜ್ಯೋತಿಯ ಬೆಳಗಿದನ-
ಲ್ಲದೆಮ್ಮದು ಭಕ್ತಿಯೌವನದಾಸೆ ಕೆಳದಿ ೨

ಎನ್ನಾತ್ಮಜ್ಯೋತಿ ತಾನೆನ್ನ ಹೃದಯದಲಿ
ಹೊನ್ನ ಹಾವುಗೆ ಮೆಟ್ಟಿ ಸುಳಿಯೆ ನಾನು
ಉನ್ನತದಿ ಹೆಚ್ಚಿ ಹಿಗ್ಗುವೆನು ಷಡಕ್ಷರ
ಚನ್ನಲಿಂಗದ ಸುಳುವಡಗಿದೆ ಕೆಳದಿ

ಹೊನ್ನಹಾವಿಗೆಯ ಮೆಟ್ಟಿದವನ ಮಿಡಿಯ ಮುಟ್ಟಿದ ಕೆಂಜೆಡೆಯವನ ಮೈಯಲ್ಲಿ ವಿಭೂತಿ ಧರಿಸಿದವನ ಕರದಲ್ಲಿ ಕಪಾಲವ ಹಿಡಿದವನ ಅರ್ಧನಾರಿಯಾದವನ ಬಾಣನ ಬಾಗಿಲ ಕಾಯ್ದವನ ನಂಬಿಗೆ ಕುಂಟಣಿಯಾದವನ ಚೋಳಗೆ ಹೊನ್ನ ಮಳೆ ಕರೆದವನ ಎನ್ನ ಮನಕ್ಕೆ ಬಂದವನ ಸದ್ಭಕ್ತರ ಹೃದಯ ದಲ್ಲಿಪ್ಪವನ ಮಾಡುವ ಪೂಜೆಯಲ್ಲೊಪ್ಪುವನ ಕೂಡಲ ಸಂಗಯ್ಯನೆಂಬುವನ.

— ಬಸವಣ್ಣನವರು

* * *

# ಹೇವವನಿಕ್ಕಲಾರೆ

ರಾಗ : ನಾದರಾಮಕ್ರಿಯೆ

ಹೇವವನಿಕ್ಕಲಾರೆ ಲಿಂಗವೆ ನಾನು ಹೇವವನಿಕ್ಕಲಾರೆ
ಭಾವಿಸಿಯೆನ್ನ ಮನವೆಂಬ ವಧುವನು
ಜಾವ ನೀನಾಳಲಾರೆ ॥ಪ॥

ಶಿಖಂಡಿಗಳ ಕೈಯಲ್ಲಿ ಕೊಲ್ಲಿಸಿಗೊಂಡು
ಮುಖಭಂಗಿತ ನೀನಾದೆ
ಸಖಿಯುಳಂಜದೆ ನಿನ್ನ ಶಿರವನೇರಿದ ಮೇಲೆ
ಸುಖನಿನಗೆಲ್ಲಿಯದು ೧

ಹಿರಿಯತನಗಳೆಂಬವು ನಿಮ್ಮೊಳು
ಬರನಾಗಿ ಹೋಯ್ತಲ್ಲಾ
ಕೆರವುಗಾಲಲಿ ತೆಲೆಯನು ಬೇಡನೊರಸಲು
ಪರಿಹಾಸ್ಯವಾಯಿತಲ್ಲ ೨

ಏಣಾಂಕಧರ ಲಿಂಗವೆ ನೀ ಹೋಗಿಯಾ
ಬಾಣಾಸುರನ ಬಾಗಿಲ
ಕೇಣಸರವನರಿಯದೆ ಕಾಯ್ದೆ ಧರೆಯೊಳು
ಊಣೆಯವು ಬಂದಿತಲ್ಲ ೩

ಹೆಗಲ ಸಂಚಿಯನೆ ಹೊತ್ತು ಕುಂಟಣಿಯಾಗಿ
ಹಗಲಿರುಳೆಡತಾಕಿದೆ
ಜಗದೊಳು ಹಿರಿಯ ತಾನಾಗಿ ನಿಮಗುಚಿತವೆ
ನಗೆಗೆಡೆಯಾಯಿತಲ್ಲಾ ೪

ಜಿನುಗುವ ಮನಕಾರದೆ ನಿಮಗೆ ನಾನು
ಕನಲಿ ಹೇವವನಿಕ್ಕಿದೆ
ಮುನಿಸು ಬೇಡಯ್ಯ ಷಡಕ್ಷರಿ ಲಿಂಗವೆ
ಮನವ ನಿಮ್ಮೊಳಗಿರಿಸು ೫

* * *

# ಹಾರು ಕಂಡ್ಯಾ ಹಂಸ

ರಾಗ : ಪಂತುವರಾಳಿ

ಹಾರು ಕಂಡ್ಯಾ ಹಂಸ ಹಾರು ಕಂಡ್ಯಾ ನೀನು
ಮೂರು ಬಲೆಗಳೊಳಗೆ ಸಿಲುಕದೆ ||ಪ||

ಆಶಾಪಾಶದೊಳಗೆ ಸಿಲ್ಕಿ ಮಾಯಾ-
ರೋಷಕಿಚ್ಚಿನಲ್ಲಿ ಬೇಯುದೆ
ವಾಸವ ಹರಿಯಜರುಗಳು ಸಿಕ್ಕಿ ಸತ್ತ
ಹೇಸಿ ಪಥವ ನೀನು ಮುಟ್ಟದೆ ೧

ನಿರಯದ ಸರಸಿಯೊಳಾಡದೆ ನೀನು
ಇರದೆ ಘನದತ್ತ ಹಾರು ಕಂಡ್ಯಾ
ಗಿರಿಯ ಸರಸಿಯೊಳಗೊಪ್ಪುವ ನೀನು
ಉರುತರ ಕ್ಷೀರವ ಸವಿ ಕಂಡ್ಯಾ ೨

ಸಾಸಿರದಳ ಕಮಲದ ಕರ್ನಿಕೆಯೊಳು ಅಲ್ಲಿ
ಭಾಸುರ ಪ್ರಣಮದ ಪ್ರಭೆಯೊಳು
ವಾಸವಾಗಿರ್ಪ ಷಡಕ್ಷರವರ ಮಹಾ
ಧೀಶನ ನೀಹೋಗಿ ನೆರೆ ಕಂಡ್ಯಾ ೩

* * *

# ಶಿವಯೋಗಾಷ್ಟಕ

ರಾಗ : ಕಂದ

ಸಂಪಿಗೆ ಹೂವಿನ ಕಂಬವು
ಸೊಂಪಿನ ಪಂಕಜದಿಮೆಸೆವ ತೊಲೆಗಳು ಮೆರೆವಾ
ಸೊಂಪಿನ ಮನೆಯೊಳು ಫಣಿಪತಿ
ಜೊಂಪಿಪ ಕುಂಡಲನ ನೆನೆವುತಾನೆಂದಿಹೆನೊ ೧

ಜಾತಿ ಸುಪಾಟಲಿ ಕದಂಬ
ಕೇತಕಿ ಸೆಳೆದೊಲೆಯು ಜಂತೆ ಚೂತದ ತಳಿರಂ
ನೂತನ ಕಂಪಿನ ಮನೆಯೊಳ್
ಭೂತೇಶನ ನೆನೆದು ಸುಖಿಸುತಾನೆಂದಿಹೆನೊ ೨

ವರಕಸ್ತುರಿ ನೆಲಗಟ್ಟಂ
ನರುಗಂಪಿನ ಪುನಗು ಭಿತ್ತಿ ಕರ್ಪುರದೆಲೆಯಂ
ಕರ ರಚಿಸಿದ ಕರುಮಾಡದಿ
ಗಿರಿಜಾತೆಯ ಪತಿಯ ನೆನೆವುತಾನೆಂದಿಹೆನೊ ೩

ಬೆಳ್ದಿಂಗಳ ಭಿತ್ತಿಗಳಿಂ
ಖದ್ಯೋತನ ಕಂಭವರ್ಧಚಂದ್ರನ ತೊಲೆಯಿಂ
ಬಳ್ದೈಸಿದ ಮಂಟಪದೊ-
ಳದ್ರಿಜೆಯ ಕಾಂತನ ನೆನೆವುತಾನೆಂದಿಹೆನೊ ೪

ಬಳಿಸಿದ ರತ್ನದ ಸಿರಿಯೊಳ್
ಥಳಥಳಿಸುವ ವಜ್ರಶೃಂಗಶೈಲದ ತುದಿಯೊಳ್
ಎಳೆಮುತ್ತಿನ ಮಂಟಪದೊ-
ಳಳಿವಿಲ್ಲದೆ ಶಿವನ ನೆನೆವುತಾನೆಂದಿಹೆನೊ ೫

ತಪ್ತ ಸುಕಾಂಚನ ಪ್ರಭೆಯಂ-
ತೊಪ್ಪುವ ಸದ್ಭೂಮಿಯಲ್ಲಿ ಮಿಂಚಿನ ಮನೆಯೊಳ್
ತಪ್ಪದೆ ಬೆಳಗಿನ ಮಂಚದಿ
ದರ್ಪಕಮರ್ದನನ ನೆನೆವುತಾನೆಂದಿಹೆನೊ ೬

ಶಶಿಕಾಂತದ ನೆಲೆಗಟ್ಟಿಂ
ಪೊಸ ಪವಳದ ಕಂಬ ಪೊಳೆವ ನೀಲದ ತೊಲೆಯಿಂ
ಹಸನಾದ ಹರ್ಮ್ಯದೊಳಗಾ
ಶಶಿಧರನಂ ನೆನೆದು ಸುಖಿಸುತಾನೆಂದಿಹೆನೊ ೭

ತಿಂಗಳು ಗಂಗೆಯು ಸೂಡಿದ
ಮಂಗಳಮಯ ಭಸಿತಲಸಿತ ಒಪ್ಪುತ ಮೆರೆವಾ
ಅಂಗದ ಚೆಲುವ ಷಡಕ್ಷರ
ಲಿಂಗದ ನೆರೆ ನೆರವಿಯಗಲದಾನೆಂದಿಹೆನೊ ೮

ಈ ಶಿವಯೋಗಾಷ್ಟಕಮಂ
ಬೇಸರಿಸದೆ ಬರೆದು ಓದಿ ಪೇಳಿದವರ್ಗಂ
ಈಶನು ತನ್ನಯ ಪುರದೊ-
ಳ್ಭಾಸುರ ಗಣಪದವನಿತ್ತು ರಕ್ಷಿಪನೊಲವಿಂ ೯

* * *

## ಶಿವಪೂಜಾಷ್ಟಕ

ರಾಗ : ಕಂದ

ಎಳೆ ಮುತ್ತಿನ ನವರತ್ನದ
ಥಳಥಳಿಸುವ ನೀಲಪವಳಪಚ್ಚೆಯ ಬೆಳಗಿಂ
ಧಳಧಳ ಘುಳುಘುಳು ನಾದವು
ಹೊಳೆಯೊಳಗಣರಸದಿ ಲಿಂಗ ಮಜ್ಜನಗೈಯ್ವೆಂ ೧

ಶಶಿಕಾಂತದ ಪಾಸಗೆಯಿಂ
ಹೊಸ ವಜ್ರದ ಗುಂಡುಬಂಡೆ ತುಂಬಿದ ಗಿರಿಯಿಂ-
ದೊಸರುವ ನಿರ್ಝರ ಜಲದಿಂ
ಶಿಶಿಕಳೆಯಂ ಧರಿಸಿದಂತೆ ಮಜ್ಜನಗೈಯ್ವೆಂ ೨

ಗಗನವನಡರುವ ಗಿರಿಯೊ
ಳ್ಮಿಗೆ ಬೆಳೆದಿಹ ಗುಲ್ಮಲತೆಯ ವೃಕ್ಷದ ನೆಳಲೊಳ್
ಸೊಗಸುವ ಮಡುಡೊಣೆ ಜಲದಿಂ
ಮಿಗೆ ಮನದಣಿವಂತೆ ಲಿಂಗಮಜ್ಜನಗೈಯ್ವೆಂ ೩

ಕೆರೆತೊರೆಸರಬೆಂಚೆಗಳಾ
ಒರತೆಗಳಿಂ ಕೂಪಕೊಳನ ನಿರ್ಮಲ ಜಲದಿಂ
ಸರಸಿಜದೆಸಳಘ್ರ್ಯಗಳಿಂ
ಹರನಿಗೆ ಪುರಹರನಿಗೊಲಿದು ಮಜ್ಜನಗೈಯ್ವೆಂ ೪

ಸುತ್ತೊತ್ತಿ ಬೆಳೆದ ಬಿಲ್ವ
ಕತ್ತರಿಸಿಯೆ ಕಾತು ತಳಿತು ತಣ್ಬನದಳದೊಳ್
ಚಿತ್ತಜವೈರಿಯ ಚರಣವ-
ನರ್ತಿಯೊಳಾ ಪತ್ರಿಯಿಂದ ಪೂಜಿಪೆನೊಲವಿಂ ೫

ಸೊಂಪಿನ ನುಂಪಿನ ಝುಂಪಿನ
ಗಂಪಿನ ಸಂಪಿಗೆಯ ವನದ ತಂಪಿನ ನೆಲದೊಳ್
ಕಂಪಿನ ಸಂಪಿಗೆಯರಳಿಂ
ಬಿಣ್ಪಿನ ಚಲುವಂಗದವನ ಪೂಜಿಪೆನೊಲವಿಂ ೬

ಜಾತಿ ಸುಪಾಟಲಿ ವೃಕ್ಷ-
ವ್ರಾತಂ ಜೋತೊಡನೆ ಕಾತು ಕೊನರಿಹ ವನದೊಳ್
ಮಾತುಳ ಕುಸುಮದಿಂ ಬಿಡದೆ
ಭೂತೇಶನ ಚರಣಯುಗವ ಪೂಜಿಪೆನೊಲವಿಂ ೭

ಭೃಂಗಂ ಬಳಸದ ಪೂವಿನ
ಶೃಂಗಾರದ ವನಗಳಲ್ಲಿ ವರಕುಸುಮಗಳಿಂ
ನಾಂಗಮುವಾಗಿ ಷಡಕ್ಷರ
ಲಿಂಗವನನವರತ ಬಿಡದೆ ಪೂಜಿಪೆನೊಲವಿಂ ೮

ಈ ಶಿವಪೂಜಾಷ್ಟಕಮಂ
ಓಸರಿಸದೆ ಬರೆದು ಓದಿ ಪಠಿಸಿದವರ್ಗಂ
ಈತನು ತನ್ನಯ ಪುರದೊಳ್
ಭಾಸುರ ಗಣಪದವನಿತ್ತು ರಕ್ಷಿಪನೊಲವಿಂ ೯

ಸ ಮಾ ಪ್ತಂ

# ಕಠಿಣ ಶಬ್ದಗಳ ಕೋಶ

ಅಡಗು - ಮಾಂಸ
ಆಂದಣ - ಪಲ್ಲಕ್ಕಿ
ಆರ್ತಿ - ಆಶೆ, ಪ್ರೇಮ
ಅಪ್ಪುದಪ್ಪುದದು - ಆಗುವದು, ಆಗದಿರುವದು
ಅಭ್ರ - ಮೋಡ
ಅಲಗು - ಖಡ್ಗ
ಆಣ್ಮ - ಒಡೆಯ
ಆರ್ - ಸಮರ್ಥವಾಗು
ಆರಡಿ - ಕುಹಕತನ
ಉಂಡಿಗೆ - ಮುದ್ರೆ
ಉಮ್ಮಳಿಸು - ಕಾತರಿಸು
ಏಡಿಸು - ಅಣಕಿಸು
ಏಣಾಂಕಧರ - ಶಿವ
ಏಳಿಸು - ಹೀಯಾಳಿಸು
ಓಡು - ಹಂಚು
ಓತು - ಪ್ರೀತಿಯಿಂದ
ಓಸರಿಸು - ಓರೆಯಾಗಿ, ಸರಿದುಹೋಗು
ಕಕುಭ - ದಿಕ್ಕು
ಕರುಬು - ಅಸೂಯೆಪಡು
ಕಿಸುಕುಳತ್ವ - ಹೀನತ್ವ
ಕೀಳು - ಆವಾರ

ಕುರುಪಿಡು - ಗುರ್ತುಮಾಡು
ಕೊಂಗಿ - ಕೊಂಕಿ, ಸೊಕ್ಕಿ
ಕೊರಚಾಟ - ನಿಂದೆ
ಕೊಸರು - ಬಲುಮೆ, ಜುಲುಮೆ
ಕೋಳುಹೋಗು - ಬಲಿಬೀಳು
ಕೋಳ - ಸುಲಿಗೆ
ಗಂಜಳ - ಹೊಲಸು
ಗುಗ್ಗೆ - ಕಿವಿಯೊಳಗಿನ ಹೊಲಸು
ಗೊಂದಣ - ಸಮೂಹ
ಚುನ್ನವಾಡು - ಅಣಕಿಸು
ಜಗಳು - ಅಗಿ
ಜವಳಿಗೆದ - ಜೋಡುಕದ
ಜಾಳಿಗೆ - ಉದಿಗೆ
ಜಿನುಗು - ಕರಗು, ಗೊಣು
ಝಾಳಿಸು - ಬದಿಗೆ ಸರಿಸು
ಢಾಳಕ - ರಂಜಕ, ಚಪಲಮನುಷ್ಯ
ತಂಡುಲ - ಅಕ್ಕಿ
ತಳ್ಳಿ - ಜಗಳ
ತಳಿತ - ಚಿಗುರಿದ
ತಿಣ್ಣನೆ - ಬಿಗಿಯಾಗಿ, ತೀವ್ರವಾಗಿ

ತಿಂಥಿಣಿ - ಗುಂಪು
ತೋವೆ - ಮದುವೆ
ನಿರ್ವಾಣ - ಮೋಕ್ಷ
ನುಸುಳು - ಕುಟಿಲತ್ವ
ನೇವುಳ - ಕಂಠಹಾರ
ಪಡುಗ - ವಸ್ತ್ರ
ಪವಿ - ಸಿಡಿಲು
ಪುಗಳವೇಳು - ಗುಳ್ಳೆ, ಏಳು
ಪುಳಕ - ರೋಮಾಂಚನ
ಪುಳಿನ - ಉಸುಬಿನ ದಿನ್ನೆ
ಪೊಲಬು - ದಾರಿ
ಬಿದಿರು - ಸಡಿಲಿಸು, ಹಿಮ್ಮೆಟ್ಟು
ಬಿಂಬಫಲ - ತೊಂಡೆಹಣ್ಣು
ಬಿಸರುಹ - ಕಮಲ
ಬೆಡಗುಗೊಳ್ಳು - ಬೆಚ್ಚು
ಭೈತ್ರ - ಹಡಗ
ಮಿನುಕ್ತಿಹ - ಮಿಂಚುತಿಹ
ಮುಡುಬ - ಅಂಗಹೀನ
ರಚ್ಚೆ - ವಿಷಯೋಪಭೋಗ
ಲೆಂಕ - ಬಂಟ
ವನಜಾಕ್ಷ - ವಿಷ್ಣು
ವನಜೋದ್ಭವ- ಬ್ರಹ್ಮ
ವಾಯಸ - ಕಾಗೆ
ವಾರವಧು - ಬೆಲೆವೆಣ್ಣು, ವೇಶ್ಯೆ
ವಿಕಳ - ಪರವಶತೆ
ವಿಭಾಡಿಸಿ - ಸದೆದು, ಹಿಂದಟ್ಟಿ
ಶುಂಡಾಲ - ಆನೆ
ಸಲುಗೆವಾಳರು - ಸೇವಕರು
ಸಲ್ಲವಿಡು - ಅಲ್ಲಗಳೆ
ಸೂಡು - ಮುಡಿ
ಸೂಸಕ - ಲಲಾಟಿಕೆ, ಹಣೆಯ ಆಭರಣ
ಸೊಗಡಿಸು - ಹಿಂದೆಗೆ
ಹಮ್ಮೈಸು - ಮೂರ್ಛೆಹೋಗು
ಹಿಸುಣ - ಚಾಡಿ
ಹುರುಡು - ಹೊಟ್ಟೆಕಿಚ್ಚು
ಹೊಳ್ಳುಗಳು - ಪೊಳ್ಳುಜನರು

* * *